ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ತತ್ವಾದರ್ಶಗಳನ್ನು ಸಾರುವ

# ಪವಿತ್ರ ಸಂದೇಶ

ಕನ್ನಡ ಪಾಕ್ಷಿಕ

ಚಂದಾದಾರ ವಿವರ

| | | |
|---|---|---|
| ದೇಶ | | |
| ವಾರ್ಷಿಕ | ₹ | 250-00 |
| ಅರ್ಧ ವಾರ್ಷಿಕ | ₹ | 150-00 |
| ಬಿಡಿ ಪ್ರತಿ | ₹ | 10-00 |
| ಗಲ್ಫ್ ರಾಷ್ಟ್ರಗಳಿಗೆ | | |
| ವಾರ್ಷಿಕ | ₹ | 2,000-00 |
| ಅರ್ಧ ವಾರ್ಷಿಕ | ₹ | 1,000-00 |

❖ ಸಂಪುಟ: 19 ❖ ಸಂಚಿಕೆ: 6 ❖ ಪುಟ: 12 ❖ ಮಾರ್ಚ್ 16-31, 2015 ❖ ಬೆಲೆ: ₹10/-

http://www.salafimangalore.org

# ಇಸ್ಲಾಮ್ ಖಡ್ಗದಿಂದ ಪ್ರಚಾರಗೊಂಡ ಧರ್ಮವಲ್ಲ!



ಅಬೂ ಆಯಿಶ

لَا إِكْرَاهَ فِي الدِّينِ ۖ قَد تَّبَيَّنَ الرُّشْدُ مِنَ الْغَيِّ ۚ فَمَن يَكْفُرْ بِالطَّاغُوتِ وَيُؤْمِن بِاللَّهِ فَقَدِ اسْتَمْسَكَ بِالْعُرْوَةِ الْوُثْقَىٰ لَا انفِصَامَ لَهَا ۗ وَاللَّهُ سَمِيعٌ عَلِيمٌ

"ಧರ್ಮದಲ್ಲಿ (ಇಸ್ಲಾಮಿನಲ್ಲಿ) ಬಲಾತ್ಕಾರವಿಲ್ಲ. ಸನ್ಮಾರ್ಗವು ದುರ್ಮಾರ್ಗದಿಂದ (ಬೇರ್ಪಟ್ಟು) ಸ್ಪಷ್ಟಗೊಂಡಿದೆ. ಆದುದರಿಂದ ಯಾರು ದುಃಶ್ಶಕ್ತಿಗಳನ್ನು (ಮಿಥ್ಯಾರಾಧ್ಯರನ್ನು) ತಿರಸ್ಕರಿಸಿ ಅಲ್ಲಾಹನಲ್ಲಿ ವಿಶ್ವಾಸವಿಡುತ್ತಾನೋ, ಅವನು ಅತ್ಯಂತ ಬಲವಾದ ಹಿಡಿದಾರವನ್ನು ಬಿಗಿಯಾಗಿ ಹಿಡಿದುಕೊಂಡನು. ಅದು ಕಡಿದು ಹೋಗುವುದಿಲ್ಲ. ಅಲ್ಲಾಹು (ಎಲ್ಲವನ್ನೂ) ಆಲಿಸುವವನೂ ಅರಿಯುವವನೂ ಆಗಿರುತ್ತಾನೆ" (ಕುರ್‌ಆನ್ 2:256).

اللَّهُ وَلِيُّ الَّذِينَ آمَنُوا يُخْرِجُهُم مِّنَ الظُّلُمَاتِ إِلَى النُّورِ ۖ وَالَّذِينَ كَفَرُوا أَوْلِيَاؤُهُمُ الطَّاغُوتُ يُخْرِجُونَهُم مِّنَ النُّورِ إِلَى الظُّلُمَاتِ ۗ أُولَٰئِكَ أَصْحَابُ النَّارِ ۖ هُمْ فِيهَا خَالِدُونَ

"ಅಲ್ಲಾಹು ಸತ್ಯವಿಶ್ವಾಸಿಗಳ ರಕ್ಷಕನಾಗಿದ್ದಾನೆ. ಅವನು ಅವರನ್ನು ಅಂಧಕಾರಗಳಿಂದ ಪ್ರಕಾಶದ ಕಡೆಗೆ ಹೊರ ತರುತ್ತಾನೆ ಮತ್ತು ತಾಗೂತ್‌ಗಳು (ದುಃಶ್ಶಕ್ತಿಗಳು) ಸತ್ಯನಿಷೇಧಿಗಳ ರಕ್ಷಕರಾಗಿದ್ದಾರೆ. ಅವರು ಇವರನ್ನು (ಸತ್ಯ ನಿಷೇಧಿಗಳನ್ನು) ಪ್ರಕಾಶದಿಂದ ಅಂಧಕಾರಗಳ ಕಡೆಗೆ ಕೊಂಡೊಯ್ಯುತ್ತಾನೆ. ಅವರು ನರಕದ ಜನರಾಗಿದ್ದಾರೆ. ಅದರಲ್ಲಿ ಅವರು ಶಾಶ್ವತ ವಾಸಿಗಳಾಗಿದ್ದಾರೆ" (ಕುರ್‌ಆನ್ 2:257).

ಇಸ್ಲಾಮಿನ ಟೀಕಾಕಾರರು ಎಲ್ಲಾ ಕಾಲಗಳಲ್ಲೂ ಎಲ್ಲೆಡೆಗಳಲ್ಲೂ ಮಾಡುತ್ತಿರುವ ಒಂದು ದುರಾರೋಪವೇನೆಂದರೆ ಇಸ್ಲಾಮ್ ಖಡ್ಗದಿಂದ ಪ್ರಚುರಗೊಂಡ ಧರ್ಮ ಎಂದಾಗಿದೆ. ಆದರೆ ಪ್ರವಾದಿ ಮುಹಮ್ಮದ್(ಸ)ರ ಕಾಲದಲ್ಲಿ ನಡೆದ ಯುದ್ಧಗಳ ಕುರಿತು ಸೂಕ್ಷ್ಮವಾಗಿ ಅವಲೋಕಿಸಿದರೆ ಅವೆಲ್ಲವೂ ಸತ್ಯವಿಶ್ವಾಸಿಗಳನ್ನು ಮೂಲೋತ್ಪಾಟನೆ ಮಾಡಲಿಕ್ಕಾಗಿ ಆಕ್ರಮಣ ನಡೆಸಿದವರನ್ನು ಎದುರಿಸಿ ಧಾರ್ಮಿಕ ಸ್ವಾತಂತ್ರ್ಯವನ್ನು ರಕ್ಷಿಸಲಿಕ್ಕಾಗಿತ್ತು ಎಂಬ ವಾಸ್ತವ ಮನವರಿಕೆಯಾದೀತು.

وَقَاتِلُوهُمْ حَتَّىٰ لَا تَكُونَ فِتْنَةٌ وَيَكُونَ الدِّينُ كُلُّهُ لِلَّهِ ۚ فَإِنِ انتَهَوْا فَإِنَّ اللَّهَ بِمَا يَعْمَلُونَ بَصِيرٌ

(ಸತ್ಯ ವಿಶ್ವಾಸಿಗಳೇ), ಕ್ಷೋಭೆಯು ಇಲ್ಲದಂತಾಗುವವರೆಗೆ ಮತ್ತು ಧರ್ಮವು ಪೂರ್ಣವಾಗಿ ಅಲ್ಲಾಹನಿಗೆ ಆಗುವ ವರೆಗೆ ನೀವು ಅವರೊಡನೆ ಯುದ್ಧ ಮಾಡಿರಿ. ಒಂದು ವೇಳೆ ಅವರು ಹಿಂದೆ ಸರಿದರೆ ಅವರು ಮಾಡುತ್ತಿರುವುದರ ಕುರಿತು ಅಲ್ಲಾಹು ಖಂಡಿತ ವೀಕ್ಷಿಸುವವನಾಗಿರುತ್ತಾನೆ. (ಕುರ್‌ಆನ್ 8:39).

ಧರ್ಮವೆಂದರೆ ಸೃಷ್ಟಿಕರ್ತನೂ ಸಂರಕ್ಷಕನೂ ಆದ ಅಲ್ಲಾಹನಲ್ಲಿರುವ ವಿಶ್ವಾಸ ಮತ್ತು ವಿಧೇಯತೆಯಾಗಿದೆ. ಇವೆರಡೂ ಮನುಷ್ಯ ಮನಸ್ಸುಗಳಲ್ಲಿ ರೂಢಮೂಲವಾಗಿರಬೇಕಾದ ವಿಷಯಗಳಾಗಿವೆ ವಿನಾ ಯುದ್ಧ ಅಥವಾ ಆಕ್ರಮಣಗಳಿಂದ ಉಂಟಾಗುವಂತಹದಲ್ಲ. ಇದುವೇ ಮೇಲೆ ಉಲ್ಲೇಖಿಸಲಾದ ಕುರ್‌ಆನಿನ 2:256ನೇ ಸೂಕ್ತದಲ್ಲಿ ಒತ್ತಿ ಹೇಳಿದ ವಿಷಯ. "ಧರ್ಮದಲ್ಲಿ ಬಲಾತ್ಕಾರವಿಲ್ಲ" ಎಂಬುದರ ಉದ್ದೇಶವೇನೆಂದರೆ ಧರ್ಮದ ವಿಷಯದಲ್ಲಿ ಬಲವಂತ ಮಾಡಿ ಯಾವುದೇ ಪ್ರಯೋಜನವಿಲ್ಲ ಅಥವಾ ಧರ್ಮದ ವಿಷಯದಲ್ಲಿ ಬಲವಂತ ಮಾಡಲೇಬಾರದು ಎಂದಾಗಿದೆ.

ಕುರ್‌ಆನಿನ ಈ ಸೂಕ್ತದ ಅವತೀರ್ಣದ ಹಿನ್ನೆಲೆಯ ಕುರಿತು ಇಬ್ನು ಅಬ್ಬಾಸ್(ರ)ರವರ ವರದಿಯಲ್ಲಿ ಹೀಗೆ ಕಾಣಬಹುದು. ಮದೀನಾ ನಿವಾಸಿಯಾದ ಓರ್ವ ಮಹಿಳೆಗೆ ಜನಿಸುವ ಗಂಡು ಮಕ್ಕಳೆಲ್ಲಾ ಬಾಲ್ಯದಲ್ಲೇ ಮರಣ ಹೊಂದುವ ಹಿನ್ನೆಲೆಯಲ್ಲಿ ಬದುಕಿದ ಮಗುವನ್ನು ಯಹೂದನಾಗಿ ಮಾಡುವೆನೆಂದು ಆಕೆ ಶಪಥ ಮಾಡುತ್ತಿದ್ದಳು. ಆ ಬಳಿಕ ಬನೂ ನದೀರ್ ಎಂಬ ಯಹೂದಿ ಗೋತ್ರವನ್ನು ಮದೀನಾದಿಂದ ಗಡಿಪಾರು ಮಾಡಿದಾಗ ಅವರೊಂದಿಗೆ ಹೋಗಲು ಸಿದ್ಧರಾದವರ ಪೈಕಿ ಕೆಲ ಅನ್ಸಾರ್‌ಗಳ ಮಕ್ಕಳೂ ಇದ್ದರು. ಆಗ ಅನ್ಸಾರ್‌ಗಳು ಪ್ರವಾದಿ(ಸ)ರೊಂದಿಗೆ ಕೇಳುತ್ತಾರೆ: "ಅಲ್ಲಾಹನ ಸಂದೇಶವಾಹಕರೇ, ಅವರು ನಮ್ಮ ಮಕ್ಕಳಲ್ಲವೇ? (ಅವರನ್ನು ಯಹೂದರಾಗಿ ಬದುಕಲು ಬಿಡುವುದೇ ಎಂದರ್ಥ). ಆ ಸಂದರ್ಭದಲ್ಲಿ ಅಲ್ಲಾಹು ಈ ಸೂಕ್ತವನ್ನು ಅವತೀರ್ಣಗೊಳಿಸುತ್ತಾನೆ. ಅನ್ಸಾರ್‌ಗಳ ಪೈಕಿ ಒಬ್ಬರ ಗಂಡು ಮಕ್ಕಳಿಬ್ಬರು ಸಿರಿಯಾದ ವ್ಯಾಪಾರಿಗಳ ಜತೆಯಲ್ಲಿ ಹೋಗಿ ಕ್ರೈಸ್ತ ಧರ್ಮ ಸ್ವೀಕರಿಸಿದ ಘಟನೆಗೆ ಸಂಬಂಧಿಸಿ ಈ ಸೂಕ್ತವು ಅವತೀರ್ಣಗೊಂಡದ್ದಾಗಿದೆಯೆಂದೂ ವರದಿ ಮಾಡಲಾಗಿದೆ. ಇಸ್ಲಾಮ್ ಧರ್ಮವನ್ನು ಸ್ವೀಕರಿಸಲು ಯಾರನ್ನೂ ಬಲವಂತ ಪಡಿಸಕೂಡದೆಂಬ ಆದೇಶಗಳು ಇತರ ಕೆಲವು ಕುರ್‌ಆನ್ ಸೂಕ್ತಗಳಲ್ಲಿ ಸ್ಪಷ್ಟಪಡಿಸಲಾಗಿದೆ.

وَلَوْ شَاءَ رَبُّكَ لَآمَنَ مَن فِي الْأَرْضِ كُلُّهُمْ جَمِيعًا ۚ أَفَأَنتَ تُكْرِهُ النَّاسَ حَتَّىٰ يَكُونُوا مُؤْمِنِينَ

"ಒಂದು ವೇಳೆ ನಿಮ್ಮ ಪ್ರಭು ಇಚ್ಛಿಸಿರುತ್ತಿದ್ದರೆ ಭೂಮಿಯಲ್ಲಿರುವ ಎಲ್ಲರೂ ವಿಶ್ವಾಸವಿಡುತ್ತಿದ್ದರು. ಹಾಗಿರುವಾಗ ಜನರು ಸತ್ಯ ವಿಶ್ವಾಸಿಗಳಾಗಲಿಕ್ಕಾಗಿ ನೀವು ಅವರನ್ನು ನಿರ್ಬಂಧಿಸುವಿರಾ? ( ಕುರ್‌ಆನ್ 10:99). ಇದೇ ವಿಷಯದಲ್ಲಿ ಪ್ರವಾದಿ ನೂಹ್(ಅ)ರವರ ಮಾತನ್ನು ಕುರ್‌ಆನಿನಲ್ಲಿ ಈ ರೀತಿ ಉಲ್ಲೇಖಿಸಲಾಗಿದೆ.

قَالَ يَا قَوْمِ أَرَأَيْتُمْ إِن كُنتُ عَلَىٰ بَيِّنَةٍ مِّن رَّبِّي وَآتَانِي رَحْمَةً مِّنْ عِندِهِ فَعُمِّيَتْ عَلَيْكُمْ أَنُلْزِمُكُمُوهَا وَأَنتُمْ لَهَا كَارِهُونَ

"ಅವರು(ನೂಹರು) ಹೇಳಿದರು: "ನನ್ನ ಜನರೇ, ನೀವು ಚಿಂತಿಸಿ ನೋಡಿದ್ದೀರಾ? ನಾನು ನನ್ನ ಪ್ರಭುವಿನ ಕಡೆಯ ಸ್ಪಷ್ಟವಾದ ಪ್ರಮಾಣದ ಮೇಲಿದ್ದೇನೆ ಮತ್ತು ಅವನು ನನಗೆ ತನ್ನ ವತಿಯ ಒಂದು ಕೃಪೆಯನ್ನು ದಯಪಾಲಿಸಿರುವನು. ಆದರೆ ಅದನ್ನು ನಿಮಗೆ ಕಾಣಲು ಸಾಧ್ಯವಾಗದಾಯಿತು (ನಾನೇನು ಮಾಡಲಿ?) ಮತ್ತು ನೀವು ಅದನ್ನು ದ್ವೇಷಿಸುವವರಾಗಿರುವಾಗ ನಾನು ನಿಮ್ಮನ್ನು ಅದಕ್ಕಾಗಿ ನಿರ್ಬಂಧಿಸುವುದೇ?" (ಕುರ್‌ಆನ್ 11:28).

فَذَكِّرْ إِنَّمَا أَنتَ مُذَكِّرٌ

لَّسْتَ عَلَيْهِم بِمُصَيْطِرٍ

"ಆದುದರಿಂದ (ಪ್ರವಾದಿಯವರೇ) ನೀವು ಉಪದೇಶಿಸಿರಿ. ನಿಶ್ಚಯವಾಗಿಯೂ ನೀವು ಒಬ್ಬ ಉಪದೇಶಕರು ಮಾತ್ರವೇ ಆಗಿರುತ್ತೀರಿ. ನೀವು ಅವರ ಮೇಲೆ ಅಧಿಕಾರ ಚಲಾಯಿಸುವವರೇನೂ ಅಲ್ಲ" (ಕುರ್‌ಆನ್ 88:21, 22).

ಇಸ್ಲಾಮಿನ ಆದರ್ಶವನ್ನು ಯಾರ ಮೇಲೂ ಬಲಾತ್ಕಾರವಾಗಿ ಹೇರಬಾರದೆಂದಿದ್ದರೆ ಅವಿಶ್ವಾಸಿಗಳೊಂದಿಗೆ ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡಬೇಕೆಂದು ಕುರ್‌ಆನಿನಲ್ಲಿ

(2ನೇ ಪುಟಕ್ಕೆ)



ಸಂಪಾದಕೀಯ

بسم الله الرحمن الرحيم

الحمد لله رب العالمين والصلاة والسلام على نبينا محمد وآله وصحبه أجمعين أما بعد

# ಚಿಕ್ಕಮಗಳೂರಿನ ಸುದ್ಧಿಗೋಷ್ಠಿ ಮತ್ತು ಅಪಪ್ರಚಾರ

ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್‌ನ ಚಿಕ್ಕಮಗಳೂರು ಘಟಕದ ಸ್ಥಾಪನಾರ್ಥ ದಿ. 05-03-2015ರಂದು ಏರ್ಪಡಿಸಲಾಗಿದ್ದ ಸುದ್ದಿಗೋಷ್ಠಿಯಲ್ಲಿ ಸಂಸ್ಥೆಯ ಕೇಂದ್ರೀಯ ಮಂಡಳಿಯ ಪ್ರಮುಖರು ನೀಡಿದ ಹೇಳಿಕೆಗಳನ್ನು ವಿಕೃತಗೊಳಿಸಿ ಕೆಲವು ವಿಘ್ನ ಸಂತೋಷಿಗಳು ಫೇಸ್‌ಬುಕ್, ವಾಟ್ಸಪ್‌ಗಳಲ್ಲಿ ರವಾನಿಸಿ ನಾಡಿನಲ್ಲೂ ಸಮುದಾಯದಲ್ಲೂ ಫಿತ್ನ ಹರಡುತ್ತಿದ್ದಾರೆ. ಸಲಫಿ ಮೂವ್‌ಮೆಂಟ್‌ನ ಪ್ರಮುಖರು ಸುದ್ದಿಗೋಷ್ಠಿಯಲ್ಲಿ ನೀಡಿದ ಹೇಳಿಕೆಗಳನ್ನು ಚಿಕ್ಕಮಗಳೂರಿನ ದಿನಪತ್ರಿಕೆಗಳು ಬಹಳ ಸ್ಪಷ್ಟವಾಗಿ ಪ್ರಕಟಿಸಿದ್ದು, ಅಲ್ಲಿನ ಅತೀ ಹೆಚ್ಚು ಪ್ರಸಾರವಿರುವ ಗಿರಿವಾರ್ತಾ ದೈನಿಕದಲ್ಲಿ ದಿನಾಂಕ 06-03-2015ರ ಸಂಚಿಕೆಯ ಮುಖ ಪುಟದಲ್ಲಿ "ದರ್ಗಾ ಪೂಜೆ, ಗೋರಿ ಪೂಜೆ ಸಂಪ್ರದಾಯಕ್ಕೆ ಇಸ್ಲಾಮಿನಲ್ಲಿ ಯಾವುದೇ ಅವಕಾಶವಿಲ್ಲ" ಎಂಬ ತಲೆ ಬರಹದಲ್ಲಿ ಪ್ರಕಟಗೊಂಡ ವರದಿಯನ್ನು ನೋಡಿರಿ:

## ದರ್ಗಾ ಪೂಜೆ, ಗೋರಿ ಪೂಜೆ ಸಂಪ್ರದಾಯಕ್ಕೆ ಇಸ್ಲಾಂನಲ್ಲಿ ಯಾವುದೇ ಅವಕಾಶವಿಲ್ಲ -ಇಸ್ಮಾಯಿಲ್



ಇದೇ ರೀತಿಯ ವರದಿ ಚಿಕ್ಕಮಗಳೂರಿನ ಇತರ ದಿನ ಪತ್ರಿಕೆಗಳಲ್ಲೂ ಮರುದಿನವೇ ಪ್ರಕಟಗೊಂಡಿತ್ತು. ಆದರೆ ತೌಹೀದ್‌ನ ಶತ್ರುಗಳಾದ ಕೆಲವು ಸಮಾಜ ಕಂಟಕರು ಮೇಲಿನ ಪತ್ರಿಕಾ ವರದಿಯನ್ನು ತಿರುಚಿ ಜನರನ್ನು ಕೆರಳಿಸುವಂತಹ ಸುಳ್ಳು ವರದಿಗಳನ್ನು ಸಿದ್ಧಪಡಿಸಿ ಅಪಪ್ರಚಾರ ವೆಬ್ಬಿಸಿದ್ದಾರೆ. ಅವರು ಹರಡಿದ ಸುಳ್ಳು ಸುದ್ದಿ ಈ ರೀತಿಯಿದೆ: "ಮುಸ್ಲಿಮರು ದೇಶದ್ರೋಹಗಳಾಗುತ್ತಿದ್ದಾರೆ - ಸಲಫಿ ಮೂವ್‌ಮೆಂಟ್" ಎಂಬ ತಲೆ ಬರಹದಲ್ಲಿ "ವಿಶ್ವದಾದ್ಯಂತ ಮುಸ್ಲಿಮ್ ಯುವಕರು ದೇಶದ್ರೋಹ, ಭಯೋತ್ಪಾದನೆ ಮತ್ತು ಸಮಾಜ ಬಾಹಿರ ಚಟುವಟಿಕೆಗಳಲ್ಲಿ ಪಾಲ್ಗೊಂಡಿದ್ದು ಇದರಿಂದಾಗಿ ಮುಸ್ಲಿಮ್ ಸಮಾಜಕ್ಕೆ ಕೆಟ್ಟ ಹೆಸರು ಬರುತ್ತಿದೆಯೆಂದು ದಕ್ಷಿಣ ಕನ್ನಡ ಸಲಫಿ ಮೂವ್‌ಮೆಂಟ್ ಸಂಘಟನೆ ಆಕ್ರೋಶ ವ್ಯಕ್ತಪಡಿಸಿದೆ. ಅಲ್ಲದೆ ಮುಸ್ಲಿಮರೇ ಮುಸ್ಲಿಮ್ ಹೆಣ್ಣು ಮಕ್ಕಳ ಮೇಲೆ ಶೋಷಣೆ ಮಾಡುತ್ತಿದ್ದು, ಮನೆಯಿಂದ ಹೊರ ಬರಲು ಬಿಡುತ್ತಿಲ್ಲ. ಆಧುನಿಕ ಜಗತ್ತಿನಲ್ಲಿ ಮುಸ್ಲಿಮ್ ಯುವಕರು ಹೆಚ್ಚೆಚ್ಚಾಗಿ ಕ್ರಿಮಿನಲ್ ಚಟುವಟಿಕೆಗಳಲ್ಲಿ ಭಾಗಿಯಾಗುತ್ತಿದ್ದು, ದೇವ ಭಯವಿಲ್ಲದೆ ಯುವಕರು ದಾರಿ ತಪ್ಪುತ್ತಿದ್ದಾರೆ. ಮುಸ್ಲಿಮ್ ಯುವಕರು ಸಮಾಜ ಘಾತುಕ ಕೆಲಸ ಮಾಡಿ ಜೈಲು ತುಂಬುತ್ತಿದ್ದು, ನಮ್ಮವರೇ ಜೈಲನ್ನು ಭರ್ತಿ ಮಾಡುತ್ತಿದ್ದಾರೆ ಎಂದು ದಕ್ಷಿಣ ಕನ್ನಡ ಸಲಫಿ ಮೂವ್‌ಮೆಂಟ್ಸ್‌ನ ಕೇಂದ್ರೀಯ ಮಂಡಳಿ ಅಧ್ಯಕ್ಷ ಅಹ್ಮದ್ ಅನ್ಸಾರ್ ಕಿಡಿಕಾರಿದ್ದಾರೆ" ಎಂಬ ಪ್ರಚೋದನಕಾರೀ ಹೇಳಿಕೆಗಳನ್ನು ತಾವೇ ಸೃಷ್ಟಿಸಿ ಸಲಫಿ ಮೂವ್‌ಮೆಂಟ್‌ನ ಅಧ್ಯಕ್ಷರ ಮೇಲೆ ಹೊರಿಸಿ ವಾಟ್ಸಪ್, ಫೇಸ್‌ಬುಕ್‌ಗಳಲ್ಲಿ ರವಾನಿಸಿದ್ದು ಮಾತ್ರವಲ್ಲ, ಮಂಗಳೂರಿನ ಪತ್ರಿಕೆಯೊಂದರಲ್ಲೂ ಪ್ರಕಟಿಸುವ ಮೂಲಕ ಅಲ್ಲಾಹನ ಸಂದೇಶವನ್ನು ರಾಜ್ಯದಾದ್ಯಂತ ಬಿತ್ತರಿಸುತ್ತಿರುವ ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್‌ನ ತೌಹೀದೀ ಅಭಿಯಾನಕ್ಕೆ ತಡೆಯೊಡ್ಡಲು ಯತ್ನಿಸುತ್ತಿರುವುದು ಖಂಡನೀಯ.

ಇಂತಹ ಸುಳ್ಳುಗಳನ್ನು ಹರಡಿ ಸಮುದಾಯದ ಮಧ್ಯೆ ವಿದ್ವೇಷದ ಕಿಡಿ ಹಚ್ಚಲೆತ್ನಿಸುತ್ತಿರುವ ಕಿಡಿಗೇಡಿಗಳ ದುಷ್ಕೃತ್ಯದ ವಿರುದ್ಧ ಮುಸ್ಲಿಮ್ ಸಮುದಾಯ ಜಾಗೃತರಾಗಬೇಕಾದುದು ಅತ್ಯಗತ್ಯ.

# ಇಸ್ಲಾಮ್ ಖಡ್ಗದಿಂದ ಪ್ರಚಾರಗೊಂಡ ಧರ್ಮವಲ್ಲ!

(ಒಂದನೇ ಪುಟದಿಂದ)

ಆಜ್ಞಾಪಿಸಿದ್ದಕ್ಕೆ ಅರ್ಥವಿದೆಯೇ ಎಂದು ಕೆಲವು ಟೀಕಾಕಾರರು ಕೇಳುವುದಿದೆ. ಧರ್ಮ ಸ್ವೀಕಾರಕ್ಕೆ ಯಾರನ್ನು ಬಲವಂತ ಮಾಡಬಾರದೆಂದು ಸ್ಪಷ್ಟ ಪಡಿಸುವ ಸೂಕ್ತಗಳು, ಸತ್ಯ-ಧರ್ಮವನ್ನು ಸ್ವೀಕರಿಸದವರೆಂದನೆ ಯುದ್ಧ ಮಾಡಬೇಕೆಂದು ಆಜ್ಞಾಪಿಸುವ 9:29ನೇ ಸೂಕ್ತವು ಅವತೀರ್ಣಗೊಳ್ಳುವುದರೊಂದಿಗೆ ಮನ್‌ಸೂಖ್ ಆಗಿರುತ್ತದೆ (ರದ್ದುಗೊಳಿಸಲ್ಪಟ್ಟಿದೆ)ಯೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಆ ಅಭಿಪ್ರಾಯಗಳಿಗೆ ಅನಿಷೇಧ್ಯವಾದ ಯಾವುದೇ ಆಧಾರಗಳಿಲ್ಲ. ಅಲ್ಲಾಹನ ಮಾರ್ಗದಲ್ಲಿ ಯುದ್ಧ ಹೂಡಿರಿ ಎಂದರೆ ಧರ್ಮವನ್ನು ಬಲವಂತವಾಗಿ ಹೇರಿರಿ ಎಂದರ್ಥವಲ್ಲ. ಇಸ್ಲಾಮಿನ ಧರ್ಮಯುದ್ಧಗಳ ಉದ್ದೇಶ ಸತ್ಯ ವಿಶ್ವಾಸಿಗಳು ಕ್ರೂರ ಪೀಡನೆಗಳಿಗೀಡಾಗುವುದನ್ನು ಮತ್ತು ಮೂಲೋತ್ಪಾಟನೆಗೊಳಿಸಲ್ಪಡುವುದನ್ನು ತಡೆಯುವ ಪ್ರತಿರೋಧ ಕಾರ್ಯಾಚರಣೆ ಮತ್ತು ಪ್ರತ್ಯಾಕ್ರಮಣಗಳೇ ವಿನಾ ಧರ್ಮವನ್ನು ಬಲವಂತವಾಗಿ ಹೇರುವ ಧರ್ಮಾಂಧ ಯುದ್ಧಗಳಲ್ಲ. ಯುದ್ಧ ಖೈದಿಗಳನ್ನಾಗಲಿ, ಯುದ್ಧದಲ್ಲಿ ಪರಾಜಯಗೊಂಡವರನ್ನಾಗಲಿ ಸತ್ಯವಿಶ್ವಾಸ ಸ್ವೀಕರಿಸಬೇಕೆಂದು ಪ್ರವಾದಿ(ಸ)ರು ಒಮ್ಮೆಯೂ ಬಲಾತ್ಕರಿಸಲಿಲ್ಲ ಎಂಬುದು ಒಂದು ಚಾರಿತ್ರಿಕ ಸತ್ಯವಾಗಿದೆ.

ಮುಸ್ಲಿಮ್ ಆದ ಬಳಿಕ ಮತಾಂತರಗೊಂಡವನನ್ನು ವಧಿಸಬೇಕೆಂದು ಪ್ರವಾದಿ(ಸ)ರು ಆದೇಶಿಸಿದ್ದಾರಲ್ಲಾ ಎಂದು ಕೆಲವರು ಪ್ರಶ್ನಿಸುವುದಿದೆ. ಮತಾಂತರಗೊಂಡ ಬಳಿಕ ಮುಸ್ಲಿಮ್ ಸಮುದಾಯದ ವಿರುದ್ಧ ಒಳಸಂಚು ನಡೆಸಿದವರು ಮತ್ತು ಕ್ಷೋಭೆಯೆಬ್ಬಿಸಿದವರ ವಿರುದ್ಧ ಕ್ರಮ ಕೈಗೊಳ್ಳಲು ಪ್ರವಾದಿ(ಸ)ರು ಸೂಚಿಸಿದ್ದು ನಿಜವೇ. ಆದರೆ ಇಷ್ಟವಿರುವ ಧರ್ಮವನ್ನು ಸ್ವೀಕರಿಸಿದ್ದಕ್ಕಾಗಿ ಯಾರನ್ನೂ ವಧಿಸಲು ಅಲ್ಲಾಹನಾಗಲಿ, ಪ್ರವಾದಿ(ಸ)ರಾಗಲೀ ಆದೇಶ ನೀಡಲಿಲ್ಲ.

"ಓ ಸತ್ಯವಿಶ್ವಾಸಿಗಳೇ, ನಿಮ್ಮಲ್ಲಿ ಯಾರಾದರೂ ತನ್ನ ಧರ್ಮವನ್ನು ಬಿಟ್ಟು ಹೋದರೆ ಆಗ (ಅವನು ತಿಳಿದಿರಲಿ) ಅಲ್ಲಾಹು ಶೀಘ್ರದಲ್ಲೇ ಒಂದು ಜನಾಂಗವನ್ನು ತರುವನು. ಅವರನ್ನು ಅವನು ಪ್ರೀತಿಸುವನು, ಅವರು ಅವನನ್ನೂ ಪ್ರೀತಿಸುವರು. ಅವರು ಸತ್ಯವಿಶ್ವಾಸಿಗಳೊಂದಿಗೆ ವಿನಮ್ರರೂ ಸತ್ಯನಿಷೇಧಿಗಳೊಂದಿಗೆ ಪ್ರತಾಪಶಾಲಿಗಳೂ ಆಗಿರುವರು. ಅವರು ಅಲ್ಲಾಹನ ಮಾರ್ಗದಲ್ಲಿ ಹೋರಾಟ ನಡೆಸುವರು ಮತ್ತು ಆರೋಪಿಸುವವನ ಯಾವ ಆರೋಪಗಳಿಗೂ ಅವರು ಭಯ ಪಡಲಾರರು. ಅದು ಅಲ್ಲಾಹನ ಅನುಗ್ರಹವಾಗಿದೆ. ಅದನ್ನು ಅವನು ತನಗಿಷ್ಟವಿರುವವರಿಗೆ ನೀಡುತ್ತಾನೆ ಮತ್ತು ಅಲ್ಲಾಹು ವಿಶಾಲನೂ ಸರ್ವಜ್ಞನೂ ಆಗಿರುತ್ತಾನೆ: (ಕುರ್‌ಆನ್ 5:54).

"ತಮಗೆ ಸನ್ಮಾರ್ಗವು ಸ್ಪಷ್ಟಗೊಂಡ ಬಳಿಕ ಹಿಂದಕ್ಕೆ ತಿರುಗಿ ಹೋದವರಿಗೆ ಶೈತಾನನು (ಅವರ ಕೃತ್ಯಗಳನ್ನು) ಅಲಂಕೃತಗೊಳಿಸಿ ಕೊಟ್ಟಿರುವನು ಮತ್ತು ಅವರಿಗೆ (ದುರ್ಮೋಹಗಳನ್ನು) ವಿಸ್ತರಿಸಿ ಕೊಟ್ಟಿರುವನು" (ಕುರ್‌ಆನ್ 47:25).

"ಸತ್ಯವಿಶ್ವಾಸ ಸ್ವೀಕರಿಸಿದ ಬಳಿಕ ನಿಷೇಧಿಸಿದವರಿಗೆ, ನಂತರ ವಿಶ್ವಾಸವಿಟ್ಟು ಪುನಃ ನಿಷೇಧಿಸಿದವರಿಗೆ, ಆ ಮೇಲೆ ಸತ್ಯನಿಷೇಧವನ್ನೇ ಹೆಚ್ಚಿಸಿಕೊಂಡವರಿಗೆ ಅಲ್ಲಾಹು ಖಂಡಿತ ಕ್ಷಮಿಸುವುದಿಲ್ಲ ಮತ್ತು ಅವರನ್ನು ಅವನು ನೇರವಾದ ಮಾರ್ಗದಲ್ಲಿ ಸೇರಿಸುವುದೂ ಇಲ್ಲ" (ಕುರ್‌ಆನ್ 4:137).

ಒಬ್ಬರು ಮುಸ್ಲಿಮ್ ಆದ ಬಳಿಕ ಅವಿಶ್ವಾಸಿಯಾಗಿ ಮಾರ್ಪಟ್ಟರೆ ಆ ಕಾರಣಕ್ಕಾಗಿ ಆತನಿಗೆ ವಧಾಶಿಕ್ಷೆ ನೀಡಬೇಕೆಂಬ ಭಾವನೆ ಮೇಲಿನ ಸೂಕ್ತಗಳಿಗೆ ವಿರುದ್ಧವಾಗಿದೆ. ರಕ್ಷಕ ಮತ್ತು ಆರಾಧ್ಯನು ಅಲ್ಲಾಹು ಮಾತ್ರ, ಅವನ ಮಾರ್ಗದರ್ಶನಗಳಿಂದ ಮಾತ್ರವೇ

(10ನೇ ಪುಟಕ್ಕೆ)

سلسلة الأحاديث الضعيفة والموضوعة

# ದುರ್ಬಲ ಮತ್ತು ಕೃತಕ ಹದೀಸ್‌ಗಳು ಒಂದು ಅವಲೋಕನ

ಭಾಗ -36



ಎಂ.ಇ. ಅಶ್ರಫ್ ಮುಸ್ಲಿಯಾರ್
ಕಾಸರಗೋಡು

## ಮೊದಲ ಮಗು ಹೆಣ್ಣಾದರೆ 'ಬರ್ಕತ್'!

ಸಾಮಾನ್ಯವಾಗಿ ದಂಪತಿಗಳು ಮೊದಲ ಹೆರಿಗೆಯಲ್ಲಿ ಗಂಡು ಮಗುವನ್ನು ನಿರೀಕ್ಷಿಸುವುದು ಸಹಜ. ಹಾಗೆ ನಿರೀಕ್ಷಿಸುವುದು ತಪ್ಪಲ್ಲವಾದರೂ ಗಂಡಿರಲಿ-ಹೆಣ್ಣಿರಲಿ ಅಲ್ಲಾಹು ತನಗೊಂದು ಸಜ್ಜನ ಸಂತತಿಯನ್ನು ದಯಪಾಲಿಸಿದರೆ ಸಾಕು ಎಂದು ಬಯಸುವುದಾದರೆ ಖಂಡಿತವಾಗಿಯೂ ಅದು ಅತ್ಯಂತ ಶ್ರೇಷ್ಠ ಕ್ರಮ ಮತ್ತು ಪ್ರವಾದಿಗಳೆಲ್ಲರ ಪ್ರಾರ್ಥನೆಗೆ ಸಮರೂಪವಾದ ಒಂದು ಬಯಕೆಯೂ ಹೌದು. ನಮ್ಮ ನಿರೀಕ್ಷೆಯೂ ಹೀಗೆಯೇ ಇರಲಿ.

ಸಂತತಿಗಳು ಅಲ್ಲಾಹು ನಮಗೆ ನೀಡುವ ಅನುಗ್ರಹ. ಮದುವೆಯಾಗಿ ಅನೇಕ ವರ್ಷಗಳಾದರೂ ಮಕ್ಕಳಿಲ್ಲದೇ ಕೊರಗುವ ದಂಪತಿಗಳ ದೈನೇಸಿ ಸ್ಥಿತಿಯನ್ನೊಮ್ಮೆ ಊಹಿಸಿ ನೋಡಿ. ಆಗ ನಮಗೆ ಗಂಡು-ಹೆಣ್ಣು ಎಂಬ ಬೇಧವಿಲ್ಲದ ಮಗುವೊಂದರ ಮಹತ್ವ ಏನೆಂದು ವೇದ್ಯವಾಗುತ್ತದೆ.

ಅದಿರಲಿ, ನಮ್ಮ ಸಮುದಾಯದ ಅನೇಕ ಜನರಲ್ಲಿ ಈಗಲೂ ಒಂದು ತಪ್ಪು ಕಲ್ಪನೆ ಬೇರೂರಿ ನಿಂತಿದೆ. ಮೊದಲ ಹೆರಿಗೆಯಲ್ಲಿ ಹೆಣ್ಣು ಮಗುವಿಗೆ ಜನ್ಮ ನೀಡಿದರೆ ಅದು ದಂಪತಿಗಳ ಪಾಲಿಗೆ ಅನುಗ್ರಹವಂತೆ. ಹೀಗೆಂದು ನಂಬುವ ಮಹಿಳೆಯರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ.

- ಆಯಿಶಾಳಿಗೆ ಏಳು ಮಕ್ಕಳು, ಮೊದಲಿನದು ಹೆಣ್ಣು. ಮೊದಲ ಮಗು ಹೆಣ್ಣಾದರೆ ಕುಟುಂಬಕ್ಕೆ ಬರ್ಕತ್ ಅಂತೆ.
- ಪಕ್ಕದ ಮನೆಯ ರುಖಿಯಾ ನಿನ್ನೆ ರಾತ್ರಿ ಹೆಣ್ಣು ಮಗುವಿಗೆ ಜನ್ಮ ನೀಡಿದ್ದಾಳೆ. ಪ್ರಥಮ ಹೆರಿಗೆ ಯಲ್ಲಿ ಹೆಣ್ಣು ಹೆರುವುದು ಒಳ್ಳೆಯದು. ಅವಳ ಅದೃಷ್ಟ ಚೆನ್ನಾಗಿದೆ.

ಇವು ಹೆಣ್ಣು ಹೆತ್ತ ಸುದ್ದಿ ತಿಳಿದಾಗ ಮಹಿಳೆಯರು ಪರಸ್ಪರ ಮಾತನಾಡುವ ರೀತಿಗಳು, ಗಂಡು ಮಗು ಹುಟ್ಟಿದ ಸುದ್ದಿ ತಿಳಿದಾಗ ಪರಸ್ಪರ ಸಂತಸ ಹಾಗೂ ಸಂಭ್ರಮ ಪಡುವ ಮಹಿಳೆಯರ ಪಾಲಿಗೆ ಹೆಣ್ಣು ಹೆತ್ತ ಸುದ್ದಿಗೆ ಪ್ರತಿಕ್ರಿಯಿಸುವ ಶೈಲಿ ಇದು.

ಇಂತಹ ಅಂಧ ಶ್ರದ್ಧೆಗಳಿಗೆ ಬೆನ್ನೆಲುಬಾಗಿರುವ ಒಂದೆರಡು ವರದಿಗಳನ್ನು ಗಮನಿಸಿ:

"ಮೊದಲ ಹೆರಿಗೆಯಲ್ಲಿ ಹೆಣ್ಣು ಹೆರುವುದು ಮಹಿಳೆಯರ ಪಾಲಿಗೆ ಶುಭಕರ" (ಹದೀಸ್).

ಹಾಫಿದ್ ಸಖಾವಿ(ರ) ಅವರು ಈ ಹದೀಸ್ ದುರ್ಬಲ ಎಂದಿದ್ದಾರೆ (ಅಲ್ ಮಖಾಸಿದುಲ್ ಹಸನ 1-677).

ಇಮಾಮ್ ಸುಯೂಥಿ ಈ ಹದೀಸ್ ಸಹೀಹ್ ಅಲ್ಲ ಎಂಬುದಾಗಿ ಕಶ್‌ಫುಲ್‌ಖಿಫಾ (2:287)ರಲ್ಲಿ ಪ್ರಸ್ತಾಪಿಸಿದ್ದಾರೆ.

ಪ್ರಥಮ ಮಗು ಹೆಣ್ಣಾಗಿರುವುದು ಮಹಿಳೆಗೆ ಶುಭಕರ ಎಂಬ ಹದೀಸನ್ನು ಇಮಾಮ್ ಇಬ್ನ್ ಅದಿಯ್ಯ್ ತಮ್ಮ ಅಲ್ ಕಾಮಿಲ್‌ನಲ್ಲಿ(6:302) ಕೃತಕ ಎಂದು ಬಣ್ಣಿಸಿದ್ದಾರೆ.

ಎಲ್ಲಕ್ಕಿಂತ ಅಚ್ಚರಿಯ ಸಂಗತಿ ಎಂದರೆ ಮೊದಲ ಮಗು ಹೆಣ್ಣಾಗುವುದನ್ನು ಒಳ್ಳೆಯದೆಂದು ವಾದಿಸುವ ಕೆಲವರು ಅದಕ್ಕೆ ಆಧಾರವಾಗಿ ಪವಿತ್ರ ಕುರ್‌ಆನಿನ ಒಂದು ಸೂಕ್ತಿಯನ್ನು ಅಪಾರ್ಥ ಮಾಡಿಕೊಂಡಿರುವುದು! ಅಲ್ಲಾಹು ಹೇಳುತ್ತಾನೆ: "ಆಕಾಶ ಭೂಮಿಗಳ ಒಡೆತನ ಅಲ್ಲಾಹನಿಗೆ ಸೇರಿದ್ದು. ತಾನಿಚ್ಛಿಸುವುದನ್ನು ಆತ ಸೃಷ್ಟಿಸುತ್ತಾನೆ. ತಾನಿಚ್ಛಿಸುವವರಿಗೆ ಹೆಣ್ಣು ಮಕ್ಕಳನ್ನೂ ತಾನಿಚ್ಛಿಸುವವರಿಗೆ ಗಂಡು ಮಕ್ಕಳನ್ನೂ ದಯ ಪಾಲಿಸುತ್ತಾನೆ ಅಥವಾ ಗಂಡು, ಹೆಣ್ಣು ಎರಡನ್ನೂ ಅವರಿಗೆ ಕೊಡವನು (ಶೂರಾ 49-50). ಈ ಆಯತ್‌ನಲ್ಲಿ ಹೆಣ್ಣು ಮಗುವಿನ ಪ್ರಸ್ತಾಪ ಮೊದಲು ಬಂದಿರುವುದರಿಂದ ಮೊದಲು ಹೆಣ್ಣು ಮಗು ಜನಿಸುವುದು ಒಳ್ಳೆಯದಂತೆ! ಎಂತಹ ಬಾಲಿಶವಾದ! ಗಂಡಿರಲಿ, ಹೆಣ್ಣಿರಲಿ ಯಾವ ಮಗುವಿಗೆ ಪ್ರಥಮ ಜನ್ಮ ನೀಡಿದರೂ ಅದರಲ್ಲಿ ಯಾವುದೇ ವ್ಯತ್ಯಾಸವಿಲ್ಲ.

ಒಂದೆಡೆ ಮೊದಲ ಹೆರಿಗೆಯಲ್ಲಿ ಹೆಣ್ಣು ಹೆರುವುದನ್ನು ಒಳಿತೆಂದು ನಂಬುವ ಈ ಸಮಾಜದಲ್ಲಿ ಮತ್ತೊಂದೆಡೆ ಹೆಣ್ಣು ಭ್ರೂಣ ಹತ್ಯೆ ಮಾಡಿಸುವ ಕ್ರೌರ್ಯವೂ ನಡೆಯುತ್ತದೆ. ಪ್ರಸವ ಪೂರ್ವ ಗರ್ಭ ಪತ್ತೆಗೆ ಸುಲಭವಾಗಿ ಕೈಗೆಟಕುತ್ತಿರುವ ತಂತ್ರಜ್ಞಾನದ ದುರುಪಯೋಗ ಮತ್ತೊಂದೆಡೆ. ಈ ಎರಡು ಕ್ರಮವೂ ಸರಿಯಲ್ಲ. ಮೊದಲಿನದು ಅಂಧವಿಶ್ವಾಸವಾದರೆ ಎರಡನೆಯದು ಅಕ್ರಮ ಹಾಗೂ ಮಹಾ ಅಪರಾಧ.

ಸಂತಾನಗಳು ಅಲ್ಲಾಹನ ಅನುಗ್ರಹ, ಅದಕ್ಕೆ ಕೃತಜ್ಞರಾಗಬೇಕಾದುದು ನಮ್ಮ ಕರ್ತವ್ಯ. ಪವಿತ್ರ ಕುರ್‌ಆನ್ ಗ್ರಂಥವನ್ನೊಮ್ಮೆ ತೆರೆದು ನೋಡಿ. ಅಲ್ಲಿ ಮಕ್ಕಳಿಗಾಗಿ ಹಂಬಲಿಸುವ ಪ್ರವಾದಿಗಳ ಪ್ರಾರ್ಥನೆ ಇದೆ. "ಓ ಅಲ್ಲಾಹ್, ನೀ ನನಗೊಂದು ಗಂಡು ಮಗುವನ್ನು ಕರುಣಿಸು ಎಂದೋ ಅಥವಾ ನನಗೊಂದು ಹೆಣ್ಣು ಮಗುವನ್ನು ಕೊಡು ಎಂದೋ ಲಿಂಗ ತಾರತಮ್ಯದ ಪ್ರಾರ್ಥನೆಯನ್ನು ಕುರ್‌ಆನಿನಲ್ಲಿ ಕಾಣಲು ಸಾಧ್ಯವಿಲ್ಲ. ಅಲ್ಲಿರುವುದು ಸಜ್ಜನ ಸಂತಾನದ (ದುರ್‍ರಿಯ್ಯಾತು ಸ್ವಾಲಿಹ್) ಪ್ರಸ್ತಾಪ ಮಾತ್ರ.

ಅಲ್ಲಾಹು ತನ್ನ ದಾಸರ ಪೈಕಿ ಒಂದು ವಿಭಾಗ ಜನರ ಪ್ರಾರ್ಥನೆಯನ್ನು ಶ್ಲಾಘಿಸುತ್ತಾನೆ: "ಓ ನಮ್ಮ ಪ್ರಭೂ, ನಮ್ಮ ಪತ್ನಿಯಂದಿರು ಮತ್ತು ಸಂತತಿಗಳಿಂದ ನಮ್ಮ ಕಂಗಳಿಗೆ ತಂಪೆರೆಯುವಂತೆ (ಮನಸ್ಸಿಗೆ ಸಮಾಧಾನ ನೀಡು) ಮಾಡು ಮತ್ತು ಧರ್ಮನಿಷ್ಠರಿಗೆ ನಮ್ಮನ್ನು ಮಾದರಿಗಳನ್ನಾಗಿ ಮಾಡು (ಫುರ್ಕಾನ್ 74).

"ಅಲ್ಲಿ, ಝಕರಿಯ್ಯ ತಮ್ಮ ಪ್ರಭುವಿನೊಂದಿಗೆ ಪ್ರಾರ್ಥಿಸಿದರು: "ನನ್ನ ಪ್ರಭೂ, ನೀನು ನನಗೆ ನಿನ್ನ ವತಿಯಿಂದ ಒಂದು ಉತ್ತಮ ಸಂತತಿಯನ್ನು ದಯಪಾಲಿಸು. ನಿಶ್ಚಯವಾಗಿಯೂ ನೀನು ಪ್ರಾರ್ಥನೆಯನ್ನು ಕೇಳುವವನಾಗಿರುವಿ (ಆಲು ಇಮ್ರಾನ್ 38).

ತಂದೆ-ತಾಯಿಯರ ಬೇಡಿಕೆ ಎರಡು ವಿಧದಲ್ಲಿರಬೇಕು. ಒಂದು, ಗಂಡು-ಹೆಣ್ಣು ಎಂಬ ಲಿಂಗ ತಾರತಮ್ಯ ಮಾಡದೆ ಪ್ರಸವಕ್ಕೆ ಮೊದಲು ಅಲ್ಲಾಹನಲ್ಲಿ ಸಜ್ಜನ ಸಂತಾನಕ್ಕಾಗಿ ಪ್ರಾರ್ಥಿಸುವುದು. ಇನ್ನೊಂದು ಅಲ್ಲಾಹು ಯಾವುದೇ ಸಂತತಿಯನ್ನು ದಯಪಾಲಿಸಿದರೂ ಅದರಲ್ಲಿ ಸಂತೃಪ್ತಿ ಹೊಂದುವುದು. ಇದು ಪ್ರವಾದಿಗಳ, ಸಿದ್ದೀಖ್‌ಗಳ, ಶುಹದಾಗಳ ಮತ್ತು ಔಲಿಯಾಗಳ ಪಥ.

ಗಂಡು ಮಗುವನ್ನು ಹೆಚ್ಚಿನವರು ಬಯಸಲು ಹಲವು ಕಾರಣಗಳಿವೆ. ಪುರುಷ ಪ್ರಧಾನ ಸಮಾಜ, ಗಂಡೆಂದರೆ ಸಂಪತ್ತು ಗಳಿಸಬಲ್ಲ ಮತ್ತು ವೃದ್ಧಾಪ್ಯದಲ್ಲಿ ಹೆತ್ತವರಿಗೆ ಆಶ್ರಯವಾಗಬಲ್ಲ ವಾರೀಸುದಾರ. ಹೆಣ್ಣು ಹಾಗಲ್ಲ, ಖರ್ಚು ವೆಚ್ಚ ಹೆಚ್ಚು. ಅವಳನ್ನು ಸಾಕಿ ಬೆಳೆಸಿ ಮದುವೆ ಮಾಡಿಸುವ ಜವಾಬ್ದಾರಿ ಬೇರೆ. ಈ ತಪ್ಪು ಕಲ್ಪನೆ ನಿವಾರಣೆಯಾಗಬೇಕು. ಇಸ್ಲಾಮ್ ಹೆಣ್ಣು ಮಕ್ಕಳನ್ನು ಸಾಕಿ ಬೆಳೆಸಿ ಉತ್ತಮ ಶಿಕ್ಷಣ ನೀಡಿ ಸತ್ಪ್ರಜೆಗಳನ್ನಾಗಿ ರೂಪಿಸುವುದಕ್ಕೆ ಹೆಚ್ಚಿನ ಮಹತ್ವ ನೀಡಿದೆ.

ಪ್ರವಾದಿ(ಸ)ರವರು ಹೆಣ್ಣು ಮಕ್ಕಳ ಶ್ರೇಷ್ಠತೆಯನ್ನು ವಿವರಿಸಿದ್ದಾರೆ. ಅವರಿಗೆ ಒಳಿತನ್ನು ಮಾಡುವಂತೆ ನಮ್ಮನ್ನು ಪ್ರೇರೇಪಿಸಿದ್ದಾರೆ. "ಯಾರು ಹೆಣ್ಣು ಮಕ್ಕಳ ಕಾರಣದಿಂದ ಪರೀಕ್ಷಿಸಲ್ಪಟ್ಟು ಅವರಿಗೆ ಒಳಿತುಂಟು ಮಾಡುತ್ತಾರೋ ಅಂತಹವರಿಗೆ ಆ ಹೆಣ್ಣು ಮಕ್ಕಳು ನರಕ ಶಿಕ್ಷೆಗೆ ತಡೆಗೋಡೆಯಾಗುವರು (ಬುಖಾರಿ 1418).

ಇಬ್ನುಲ್ ಖಯ್ಯೂಮ್ ಹೇಳುತ್ತಾರೆ: "ಹೆಣ್ಣು ತಾಯಿಯಾಗಿ, ಸಹೋದರಿಯಾಗಿ, ಹೆಂಡತಿಯಾಗಿ, ಸಮಾಜದ ಅರ್ಧ ಭಾಗವಾಗಿದ್ದಾಳೆ. ಉಳಿದ ಅರ್ಧ ಸಮಾಜವನ್ನೂ ಅವಳೇ ಹೆರುತ್ತಾಳೆ. ಹಾಗಾಗಿ ಹೆಣ್ಣೆಂದರೆ ಒಂದು ಸಮಾಜ (ತುಹ್‌ಫತುಲ್ ಮೌದೂದ್ ಫೀ ಅಹ್ಕಾಮಿಲ್ ಮೌಲೂದ್ ಪುಟ: 6).

With Best Compliments From:



M/s. ALPHA MEDICALS
S.K. Complex, Near Unity Health Complex,
High Land, Mangalore - 575 002. Ph.: 4268800

# ಧರ್ಮನಿಷ್ಠ ಖಲೀಫರು

✍ ಅಹ್ಮದ್ ಅನ್ಸಾರ್,
ಮಂಗಳೂರು

## ಅಬೂಬಕರ್(ರ)ರವರ ಗುಣ ಸ್ವಭಾವ ಮತ್ತು ಧರ್ಮನಿಷ್ಠೆ

ಪ್ರವಾದಿ ಮುಹಮ್ಮದ್(ಸ)ರ ಬಳಿಕ ಇಸ್ಲಾಮಿನಲ್ಲಿ ಅತ್ಯಂತ ಕೀರ್ತಿಶೇಷ ವ್ಯಕ್ತಿಯೆಂದರೆ ಖಲೀಫಾ ಅಬೂಬಕರ್ ಸಿದ್ದೀಕ್(ರ) ರವರು. ಅತ್ಯಂತ ಮೃದು ಸ್ವಭಾವದವರು ಮತ್ತು ಗೌರವಾನ್ವಿತರು. ಆದರೆ ಅಗತ್ಯದ ಸಂದರ್ಭಗಳಲ್ಲಿ ಕಠೋರರೂ ಆಗುತ್ತಿದ್ದರು. ಅವರು ಇಸ್ಲಾಮಿನ ಓರ್ವ ಸತ್ಯದೂತರಾಗಿದ್ದರು. ಪ್ರಜ್ಞಾವಂತ, ಚತುರ, ಪ್ರಭಾವಿ ಹಾಗೂ ಪರಿಶ್ರಮಿಯಾಗಿದ್ದ ಅಬೂಬಕರ್(ರ)ರವರು ಇಸ್ಲಾಮಿನ ಇತಿಹಾಸದಲ್ಲಿ ಅಚ್ಚಳಿಯದೇ ಉಳಿದ ಉನ್ನತ ವ್ಯಕ್ತಿಯಾಗಿದ್ದಾರೆ.

ಪ್ರವಾದಿ(ಸ)ರ ಅನುಯಾಯಿಗಳ ಪೈಕಿ ಅಬೂಬಕರ್(ರ)ರವರು ಅತೀ ಹೆಚ್ಚು ದೇವಭಯವುಳ್ಳವರಾಗಿದ್ದರು. ಅವರೆಂದೂ ನಿಷಿದ್ಧ ಆಹಾರ ಸೇವಿಸಲಿಲ್ಲ. ಒಮ್ಮೆ ಅವರ ಗುಲಾಮನೊಬ್ಬ ಸ್ವಲ್ಪ ಆಹಾರವನ್ನು ತಂದು ಕೊಟ್ಟನು. ಅಬೂಬಕರ್(ರ)ರವರು ಅದರಿಂದ ಒಂದು ತುತ್ತನ್ನು ತೆಗೆದು ತಿಂದರು. ತಕ್ಷಣ ಅವರಿಗೆ ತಿಳಿಯಿತು, ಇದು ಹಲಾಲ್ ಆದ ಆಹಾರವಲ್ಲ, ಇದು ಭವಿಷ್ಯ ನುಡಿದು ಸಂಪಾದಿಸಿದ ಹಣದಿಂದ ತಯಾರಿಸಿದ ಹರಾಮ್ ಆದ ಆಹಾರ ಎಂದು. ಅವರು ಗುಲಾಮನೊಂದಿಗೆ "ಓ ಹೋ... ಖಂಡಿತವಾಗಿಯೂ ನೀನು ನನ್ನನ್ನು ಕೊಂದೆ" ಎನ್ನುತ್ತಾ ಗಂಟಲೊಳಗೆ ಕೈಹಾಕಿ ವಾಂತಿ ಮಾಡಲೆತ್ನಿಸಿದರು. ಆದರೆ ಅದು ಸಾಧ್ಯವಾಗದಾಗ ನೀರು ಕುಡಿದು ವಾಂತಿ ಮಾಡಿ ಹೊಟ್ಟೆ ಖಾಲಿ ಮಾಡಿದರು. ಯಾವುದೇ ಸಂದರ್ಭದಲ್ಲೂ ಅವರು ಯಾರಲ್ಲೂ ಅಸಭ್ಯವಾಗಿ ಮಾತನಾಡಲಿಲ್ಲ. ಒಮ್ಮೆ ಅವರು ಉಮರ್(ರ)ರೊಂದಿಗೆ ನಿಷ್ಠುರ ಶಬ್ದದಿಂದ ಮಾತನಾಡಿದ್ದರು. ಅದು ಗೊತ್ತಾದಾಗ ತಕ್ಷಣ ಕ್ಷಮೆ ಕೇಳಿದರು. ಆದರೆ ಉಮರ್(ರ)ರವರು ಕ್ಷಮೆ ನೀಡಲು ತಡ ಮಾಡಿದರು. ಆಗ ಅಬೂಬಕರ್(ರ) ಅಸಮಾಧಾನಗೊಂಡು ಪ್ರವಾದಿ(ಸ)ರಿಂದ ಉಮರ್(ರ)ರಿಗೆ ಹೇಳಿಸಿ ಕ್ಷಮೆ ಪಡೆದುಕೊಂಡರು.

ಅಬೂಬಕರ್(ರ) ತನ್ನ ಬದುಕಿನ ಪ್ರತೀ ಕ್ಷಣವೂ ಅಲ್ಲಾಹನನ್ನು ಭಯಪಡುತ್ತಿದ್ದರು. ಒಮ್ಮೆ ಅವರು ಒಂದು ತೋಟದೊಳಗೆ ನಡೆದಾಡುತ್ತಿದ್ದಾಗ ಒಂದು ಪಕ್ಷಿಯನ್ನು ಕಂಡರು. ಅದರತ್ತ ದಿಟ್ಟಿಸಿ ನೋಡಿ "ಓ ಪಕ್ಷಿಯೇ, ನೀನು ನಿಜವಾಗಿಯೂ ಭಾಗ್ಯಶಾಲಿ. ನೀನು ತಿನ್ನುತ್ತಿ, ಕುಡಿಯುತ್ತಿ, ನಿನಗಿಷ್ಟ ಬಂದ ಕಡೆಗೆ ಹಾರಾಡುತ್ತಿ. ನಾನು ನಿನ್ನಂತಾಗಲು ಬಯಸುತ್ತೇನೆ" ಎನ್ನುತ್ತಾರೆ. ಕೆಲವೊಮ್ಮೆ ಅವರು ಹೀಗೆ ಹೇಳುತ್ತಿದ್ದರು: "ನಾನು ಹುಲ್ಲಾಗುತ್ತಿದ್ದರೆ! ಪ್ರಾಣಿಗಳು ಮೇಯುವಾಗ ಹುಲ್ಲುಗಳ ಜೀವನವು ಕೊನೆಗೊಳ್ಳುತ್ತದೆ ಅಥವಾ ನಾನೊಂದು ಮರವಾಗುತ್ತಿದ್ದರೆ!"

ಅಬೂಬಕರ್(ರ)ರವರು ತನ್ನ ಸರ್ವಸ್ವವನ್ನೂ ಅಲ್ಲಾಹು ಮತ್ತು ಪ್ರವಾದಿ(ಸ)ರಿಗಾಗಿ ಪರಿತ್ಯಾಗ ಮಾಡಿದ ಮಹಾನ್ ದೇವಭಕ್ತರಾಗಿದ್ದರು. ಪ್ರವಾದಿ(ಸ)ರು ಯಾವ ರೀತಿ ನಮಾಝ್ ಮತ್ತು ಇತರ ಆರಾಧನಾ ಕರ್ಮಗಳನ್ನು ನಿರ್ವಹಿಸುತ್ತಿದ್ದರೋ ಅದೇ ರೀತಿ ಅಬೂಬಕರ್(ರ)ರವರು ನಿರ್ವಹಿಸುತ್ತಿದ್ದರು. ಪ್ರವಾದಿ(ಸ)ರು ಹೇಳಿದರು: "ಸ್ವರ್ಗದ ಎಲ್ಲಾ ದ್ವಾರಗಳ ಮೂಲಕವೂ ಅಬೂಬಕರ್ ಪ್ರವೇಶಿಸುವರು. ನನ್ನ ಸಮುದಾಯದಲ್ಲಿ ಪ್ರಥಮವಾಗಿ ಸ್ವರ್ಗ ಪ್ರವೇಶಿಸುವವರು ಅವರೇ.

## ಅಬೂಬಕರ್ ಸಿದ್ದೀಖ್(ರ) ರಾಜ್ಯಭಾರ

ಖಲೀಫಾ ಅಬೂಬಕರ್(ರ)ರವರು ಅದುವರೆಗೆ ಯಾರೂ ಕಂಡಿರದಂತಹ ಆಡಳಿತ




ವ್ಯವಸ್ಥೆಯೊಂದನ್ನು ಜಗತ್ತಿಗೆ ಪರಿಚಯಿಸಿದರು. ಅವರ ಆಡಳಿತ ಪ್ರಜಾಪ್ರಭುತ್ವ ವ್ಯವಸ್ಥೆಯ ಆಡಳಿತವಾಗಿತ್ತು. ಪ್ರತಿಯೊಂದು ವಿಷಯವನ್ನು ಪ್ರಮುಖ ಸಹಾಬಿಗಳೊಂದಿಗೆ ಚರ್ಚಿಸಿದ ಬಳಿಕವೇ ತೀರ್ಮಾನಿಸುತ್ತಿದ್ದರು. "ನಾನು ಅಲ್ಲಾಹನ ಸಂದೇಶವಾಹಕರ(ಸ) ಒಬ್ಬ ಪ್ರತಿನಿಧಿ ಮಾತ್ರ" ಎಂದು ಅವರು ಹೇಳುತ್ತಿದ್ದರು. ಅಂದರೆ ನಾನು ಪ್ರವಾದಿ(ಸ)ರ ಮಾರ್ಗವನ್ನು ಮಾತ್ರವೇ ಅನುಸರಿಸುತ್ತೇನೆ ಎಂದರ್ಥ. ಅವರು ಜನರೊಂದಿಗೆ ಅನೇಕ ಬಾರಿ ಹೀಗೆ ಹೇಳುತ್ತಿದ್ದರು: ಅಲ್ಲಾಹನಾಣೆ, ನಾನೆಂದೂ ಈ ಖಲೀಫ ಸ್ಥಾನವನ್ನು ಇಷ್ಟಪಟ್ಟಿರಲಿಲ್ಲ. ನನಗೆ ಇದರ ಯೋಚನೆಯೇ ಇರಲಿಲ್ಲ. ಬಹಿರಂಗದಲ್ಲಾಗಲಿ, ಅಂತರಾಳದಲ್ಲಾಗಲಿ ನನಗಿದರ ಆಸೆಯಿರಲಿಲ್ಲ. ಖಲೀಫ ಎಂಬ ಈ ಚುಕ್ಕಾಣಿಯನ್ನು ಬಲವಂತವಾಗಿ ನನ್ನ ಮೇಲೆ ಹೇರಿದ್ದಾರೆ. ನಾನಿದನ್ನು ಒಬ್ಬ ನಿಜವಾದ ಸತ್ಯವಂತನಿಗೆ ವರ್ಗಾಯಿಸಲು ಇಚ್ಛಿಸುತ್ತೇನೆ. ಒಂದು ದಿನ ಕೆಲವರು ಅಬೂಬಕರ್(ರ)ರವರ ಬಳಿಗೆ ಬಂದು "ಉಮರ್(ರ)ರವರು ತಾನೇ ಖಲೀಫರೆಂಬಂತೆ ವರ್ತಿಸುತ್ತಾರೆ" ಎಂದು ಉಮರ್(ರ)ರವರ ನಿಷ್ಠುರ ಸ್ವಭಾವದ ಬಗ್ಗೆ ದೂರು ಕೊಟ್ಟರು. ಅದಕ್ಕೆ ಅಬೂಬಕರ್(ರ)ರವರು "ನಿಜವಾಗಿಯೂ ಖಲೀಫಾ ಸ್ಥಾನಕ್ಕೆ ಅವರೇ ಅರ್ಹರು, ನಾನು ಅಲ್ಲಾಹನ ಒಬ್ಬ ವಿನಮ್ರ ದಾಸ, ಅವನು ನನಗೆ ಈ ಹುದ್ದೆಯನ್ನು ಕೊಟ್ಟಿದ್ದಾನೆ" ಎಂದು ಉತ್ತರಿಸಿದರು.

## ಸಮಾಲೋಚನಾ ಮಂಡಳಿ (ಶೂರಾಃ)

ಇಸ್ಲಾಮಿ ಸಾಮ್ರಾಜ್ಯದ ಪ್ರಥಮ ಖಲೀಫ ಅಬೂಬಕರ್ ಸಿದ್ದೀಖ್(ರ)ರವರು ಪ್ರತಿಯೊಂದು ವಿಷಯವನ್ನು ತನ್ನ ಸಹವರ್ತಿಗಳೊಂದಿಗೆ ಸಮಾಲೋಚಿಸದೆ ತೀರ್ಮಾನಿಸುತ್ತಿರಲಿಲ್ಲ. ಅದಕ್ಕಾಗಿಯೇ ಒಂದು ಸಮಾಲೋಚನಾ ಮಂಡಳಿ (ಶೂರಾಃ)ವನ್ನು ರಚಿಸಲಾಗಿತ್ತು. ಈ ಮಂಡಳಿಗೆ ಇಂದಿನ ಚುನಾವಣಾ ರೀತಿಯಂತೆಯೇ ಜನರ ಪೈಕಿ ಗೌರವಾನ್ವಿತ ಪ್ರಮುಖರನ್ನು ಸದಸ್ಯರನ್ನಾಗಿ ಮಾಡಲಾಗುತ್ತಿತ್ತು. ಜನರು ಯಾವುದೇ ಆಕ್ಷೇಪಗಳಿಲ್ಲದೆ ತಮ್ಮ ಪ್ರತಿನಿಧಿಗಳನ್ನು ಆರಿಸುತ್ತಿದ್ದರು. ಶೂರಾಃದ ಸದಸ್ಯರಾಗಲು ವರ್ಣ, ವರ್ಗ, ಕುಲ, ಗೋತ್ರ, ಸಂಪತ್ತು, ಲೌಕಿಕ ಪ್ರಭಾವ ಇತ್ಯಾದಿಗಳನ್ನು ಮಾನದಂಡವಾಗಿ ಪರಿಗಣಿಸುತ್ತಿರಲಿಲ್ಲ. ಇಸ್ಲಾಮಿಗಾಗಿ ಸರ್ವಸ್ವವನ್ನೂ ಸಮರ್ಪಿಸಿ ಅಲ್ಲಾಹು ಮತ್ತು ಪ್ರವಾದಿ(ಸ)ರಿಗೆ ಹತ್ತಿರವಾದವರನ್ನು ಮಾತ್ರವೇ ಶೂರಾಃದ ಸದಸ್ಯರಾಗಿ ಆರಿಸಲಾಗುತ್ತಿತ್ತು.

ಇಬ್ನು ಸಅದ್ ಬರೆಯುತ್ತಾರೆ: "ಯಾವುದಾದರೂ ಸಮಸ್ಯೆಗಳು ಬಂದಾಗ ಅಬೂಬಕರ್(ರ)ರವರು ಪ್ರಸಿದ್ಧ ಮುಹಾಜಿರ್‌ಗಳು ಹಾಗೂ ಅನ್ಸಾರ್‌ಗಳನ್ನು ಮತ್ತು ಶೂರಾಃದ ಶಾಶ್ವತ ಸದಸ್ಯರಾದ ಉಮರ್, ಉಸ್ಮಾನ್, ಅಲಿ, ಅಬ್ದುಲ್ ರಹ್ಮಾನ್‌ಬ್ನು ಔಫ್, ಮುಅದುಬ್ನು ಜಬಲ್, ಉಬೈಬ್ನು ಕಅಬ್, ಝೈದ್‌ಬ್ನು ಸಾಬಿತ್(ರ) ಮುಂತಾದವರನ್ನು ಕರೆದು ಸಮಾಲೋಚಿಸುತ್ತಿದ್ದರು.

## ಅಧಿಕಾರಿಗಳ ನೇಮಕಾತಿ

ಅಬೂಬಕರ್(ರ)ರವರು ಸಾರ್ವಜನಿಕ ಕೆಲಸಗಳನ್ನು ನಿರ್ವಹಿಸಲಿಕ್ಕಾಗಿ ಅಧಿಕಾರಿಗಳನ್ನು ನೇಮಕ ಮಾಡುವಾಗ ತಮ್ಮ ಮಕ್ಕಳನ್ನಾಗಲಿ, ಕುಟುಂಬದವರನ್ನಾಗಲಿ ನೇಮಕಗೊಳಿಸುತ್ತಿರಲಿಲ್ಲ. ಜನರ ಪೈಕಿ ಹೆಚ್ಚು ಅರ್ಹತೆಯುಳ್ಳವರನ್ನು ಹುಡುಕಿ ಅಧಿಕಾರಿ ಹುದ್ದೆಗಳಿಗೆ ನೇಮಿಸುತ್ತಿದ್ದರು. ಮಾತ್ರವಲ್ಲ, ಅವರ ಕೆಲಸಗಳ ಕುರಿತು ವಿವರಣೆ ಮತ್ತು ಉಪದೇಶ ನೀಡುತ್ತಿದ್ದರು. ಆಮಿರುಬ್ನು ಆಸ್ ಮತ್ತು ವಲೀದುಬ್ನು ಉಖ್‌ಬಾ(ರ)ರನ್ನು ಖುದಾಹ್ ಗೋತ್ರದವರ ಝಕಾತ್ ಸಂಗ್ರಹಗಾರರಾಗಿ ನೇಮಿಸಿದಾಗ ಅಬೂಬಕರ್(ರ)ರವರು ಈ ರೀತಿ ಉಪದೇಶಿಸಿದರು. ನೀವು ರಹಸ್ಯವಾಗಿಯೂ ಬಹಿರಂಗವಾಗಿಯೂ ಅಲ್ಲಾಹನನ್ನು ಭಯಪಡಿರಿ. ಯಾರು ಅಲ್ಲಾಹನನ್ನು ಭಯ ಪಡುತ್ತಾರೋ ಅವನಿಗೇ ತಿಳಿಯದ ರೀತಿಯಲ್ಲಿ ಅಲ್ಲಾಹು ಸಂರಕ್ಷಣೆ ನೀಡುವನು. ಯಾರಾದರೂ ಅಲ್ಲಾಹನನ್ನು ಭಯಪಟ್ಟರೆ ಅಲ್ಲಾಹು ಅವನ ಪಾಪಗಳನ್ನು ಕ್ಷಮಿಸುವನು ಮತ್ತು ಇಮ್ಮಡಿ ಪ್ರತಿಫಲ ನೀಡುವನು. ಜನರೊಂದಿಗೆ ಪ್ರೀತಿ, ಕರುಣೆ ತೋರಿಸುವುದು ಮಹತ್ತರ ಧರ್ಮನಿಷ್ಠೆಯಾಗಿದೆ. ಇಂತಹ ಒಂದು ನಿರ್ಧಿಷ್ಟ ದಾರಿಯಲ್ಲಿ ನೀವಿದ್ದೀರಿ. ಧರ್ಮವು ಆಜ್ಞಾಪಿಸಿದುದರಲ್ಲಿ ದೃಢವಾಗಿರಿ. ಅದು ನಿಮ್ಮನ್ನು ಎಲ್ಲಾ ಕೆಡುಕುಗಳಿಂದ ಕಾಪಾಡುತ್ತದೆ".

ಯುದ್ಧದ ಮೂಲಕ ಜಯಿಸಿದ ಸಿರಿಯಾದ ಒಂದು ಪ್ರಾಂತ್ಯಕ್ಕೆ ಯಝೀದ್‌ಬ್ನು ಸುಫ್ಯಾನ್‌ರನ್ನು ಗವರ್ನರ್ ಆಗಿ ನೇಮಿಸಿದಾಗಲೂ ಅಬೂಬಕರ್(ರ)ರವರು ಇದೇ ರೀತಿ ಉಪದೇಶಿಸಿದ್ದರು. ಕಟ್ಟುನಿಟ್ಟಿನ ಆಡಳಿತಗಾರರಾಗಿದ್ದ ಅಬೂಬಕರ್(ರ)ರವರು ತಮ್ಮ ಅಧಿಕಾರಿಗಳ ನಿಯಮ ಬಾಹಿರ ಶಿಷ್ಟಾಚಾರಗಳನ್ನು ಒಪ್ಪುತ್ತಿರಲಿಲ್ಲ. ತನ್ನ ಅಧಿಕಾರಿಗಳಲ್ಲಿ ಯಾರಾದರೂ ಅನರ್ಹರೆಂದು ಕಂಡು ಬಂದರೆ ತಕ್ಷಣ ಅವರಿಗೆ ಎಚ್ಚರಿಕೆ ಕೊಡುತ್ತಿದ್ದರು. ಒಮ್ಮೆ ಯಾವುದೋ ಒಂದು ತಪ್ಪಿಗಾಗಿ ಖಾಲಿದ್‌ಬ್ನು ವಲೀದ್(ರ)ರಿಗೆ ಬರೆದ ಪತ್ರದಲ್ಲಿ "ನೀವು ಸಂತೋಷದಲ್ಲಿದ್ದೀರಿ, ಆದರೆ ಮುಸ್ಲಿಮರ ರಕ್ತವು ನಿಮ್ಮ ಢೇರೆಯ ಹತ್ತಿರದಿಂದಲೇ ಹರಿಯುತ್ತಿದೆ" ಎಂದಿದ್ದರು.

## ಅಬೂಬಕರ್(ರ)ರವರ ಸರಕಾರದ ಉನ್ನತ ಅಧಿಕಾರಿಗಳು

ಮದೀನಾ ಅಬೂಬಕರ್(ರ)ರವರ ರಾಜಧಾನಿಯಾಗಿತ್ತು. (5ನೇ ಪುಟಕ್ಕೆ)

# ಧಾರ್ಮಿಕ ಪ್ರಶ್ನೋತ್ತರಗಳು

## ಹಜರುಲ್ ಅಸ್ವದ್ ಚುಂಬಿಸುವುದು ಬರಕತ್‌ಗಾಗಿಯೇ?

*ಪ್ರ: ಹಜರುಲ್ ಅಸ್ವದ್‌ಅನ್ನು ಚುಂಬಿಸುವುದರ ಉದ್ದೇಶ ಬರ್ಕತ್ ಪಡೆಯುವುದೇ?*

ಉ: ಅಲ್ಲ, ಪ್ರವಾದಿ(ಸ)ರವರು ಹೇಳಿದಂತೆ "ಕಅ್‌ಬ ಪ್ರದಕ್ಷಿಣೆ(ತವಾಫ್), ಸಫಾ-ಮರ್ವಾಗಳ ನಡುವಿನ ಸಅ್‌ಯ್, ಮತ್ತು ಜಮ್ರಾಗಳಿಗೆ ಕಲ್ಲೆಸೆಯುವುದು, ಇತ್ಯಾದಿಗಳ ಉದ್ದೇಶ ಅಲ್ಲಾಹನ ದಿಕ್ರ್(ಸ್ಮರಣೆ)ಅನ್ನು ಸಂಸ್ಥಾಪಿಸುವುದಾಗಿದೆ.

ಅಲ್ಲಾಹನ ಭವನವಾದ ಪವಿತ್ರ ಕಅ್‌ಬಾವನ್ನು ತವಾಫ್ ಮಾಡುವ ವಿಶ್ವಾಸಿಯ ಹೃದಯದಲ್ಲಿ ಅಲ್ಲಾಹನ ಕುರಿತ ಪರಮ ಪೂಜ್ಯ ಭಾವನೆ ಅವನನ್ನು ಸ್ಮರಿಸುವಂತೆ ಪ್ರೇರೇಪಿಸುತ್ತದೆ.

ಹಾಗಾಗಿ ಅವನ ನಡೆ, ಹಜರುಲ್ ಅಸ್ವದ್‌ನ ಚುಂಬನ ಇತ್ಯಾದಿಗಳೆಲ್ಲವೂ ದಿಕ್ರ್ ಎಂಬ ವಿಶಾಲಾರ್ಥದಲ್ಲಿ ಅಲ್ಲಾಹನಿಗೆ ಸಲ್ಲಿಸುವ ಆರಾಧನೆ ಎನಿಸುತ್ತದೆ. ಇದರಲ್ಲಿ ತಬರ್ರುಕ್‌ನ ಪ್ರಶ್ನೆಯೇ ಉದ್ಭವಿಸುವುದಿಲ್ಲ.

ಒಮ್ಮೆ ಉಮರ್(ರ)ರವರು ಹಜರುಲ್ ಅಸ್ವದ್‌ಅನ್ನು ಚುಂಬಿಸುತ್ತಾ ಹೇಳಿದರು: "ನನಗೆ ಗೊತ್ತು ನೀನೊಂದು ಕಲ್ಲು ಮಾತ್ರ, ಯಾವುದೇ ಉಪದ್ರವವಾಗಲೀ, ಉಪಕಾರವಾಗಲೀ ಮಾಡಲು ನಿನ್ನಿಂದ ಸಾಧ್ಯವಿಲ್ಲ.

ಪ್ರವಾದಿ(ಸ)ರವರು ನಿನ್ನನ್ನು ಚುಂಬಿಸುವುದನ್ನು ನೋಡದಿರುತ್ತಿದ್ದರೆ ಖಂಡಿತವಾಗಿಯೂ ನಾನು ನಿನ್ನನ್ನು ಚುಂಬಿಸುತ್ತಿರಲಿಲ್ಲ: (ಹದೀಸ್). ಹಜರುಲ್ ಅಸ್ವದ್‌ನ ಚುಂಬನದ ಹಿಂದೆ ಪ್ರವಾದಿ ಚರ್ಯೆಯ ಅನುಕರಣೆ ಇರುವುದು ಇದರಿಂದ ಸ್ಪಷ್ಟವಾಗುತ್ತದೆ.

ತಬರ್ರುಕ್‌ನ ಉದ್ದೇಶಕ್ಕಾಗಿ ಹಜರುಲ್ ಅಸ್ವದ್ ಚುಂಬಿಸಲಾಗುತ್ತದೆ ಎಂಬ ವಾದ ಆಧಾರ ರಹಿತ ಮತ್ತು ನಿರರ್ಥಕ ಎಂದು ಶೈಖ್ ಸಾಲಿಹ್ ಬಿನ್ ಉಸೈಮೀನ್(ರ) ಹೇಳಿದ್ದಾರೆ.

## ಹೊಸ ವಸ್ತ್ರ ಧರಿಸುವ ಮೊದಲು ಒಗೆಯಬೇಕೇ?

*ಪ್ರ: ಹೊಸ ಉಡುಪು ಧರಿಸುವ ಮೊದಲು ತೊಳೆಯುವುದು ಸುನ್ನತ್ ಎಂದು ಕೆಲವರು ಹೇಳುವುದನ್ನು ಕೇಳಿದ್ದೇನೆ, ಇದು ಸರಿಯೇ?*

ಉ: ಹೊಸ ವಸ್ತ್ರ ತೊಡುವ ಮೊದಲು ಒಗೆಯುವುದು ಸುನ್ನತ್ ಎಂಬ ವಾದಕ್ಕೆ ಪ್ರವಾದಿ ಚರ್ಯೆಯಲ್ಲಿ ಯಾವುದೇ ಪುರಾವೆ ಇಲ್ಲ. ಪೂರ್ವಿಕರಲ್ಲಿ ಯಾರೂ ಇದನ್ನು ಪ್ರಸ್ತಾಪಿಸಿದ್ದಾಗಿ ನಾನು ಕಂಡಿಲ್ಲ. ಆದರೆ ಅಂಗಡಿಗಳಿಂದ ಹೊಸತಾಗಿ ಖರೀದಿಸಿದ ವಸ್ತ್ರವನ್ನು ಒಮ್ಮೆ ಒಗೆದು ಸ್ವಚ್ಛಗೊಳಿಸದೆ ಹಾಗೆಯೇ ಧರಿಸುವುದರಿಂದ ಅದರಲ್ಲಿರುವ ಬ್ಯಾಕ್ಟೀರಿಯಾ ಮತ್ತಿತರ ರಾಸಾಯನಿಕ ಅಂಶಗಳು ತ್ವಚೆಯ ಮೇಲೆ ದುಷ್ಪರಿಣಾಮ ಬೀರುವ ಸಾಧ್ಯತೆ ಇರುವುದರಿಂದ ವೈದ್ಯಕೀಯ ಶಾಸ್ತ್ರ ಪ್ರಕಾರ ತೊಳೆಯುವುದು ಉತ್ತಮ ಎನ್ನಲಾಗುತ್ತದೆ. ಪವಿತ್ರ ಇಸ್ಲಾಮ್ ಧರ್ಮವು ಮನುಷ್ಯನ ಆರೋಗ್ಯ ಸಂರಕ್ಷಣೆ ಹಾಗೂ ಸ್ವಚ್ಛತೆಗೆ ಹೇರಳ ಒತ್ತು ನೀಡಿದೆ. ಈ ದೃಷ್ಟಿಯಿಂದ ಹೊಸ ಉಡುಗೆಗಳನ್ನು ಧರಿಸುವ ಮೊದಲು ತೊಳೆದು ಸ್ವಚ್ಛಗೊಳಿಸುವುದು ಹಿತಕರವಾಗಿದೆ.

## ಮುಸ್‌ಹಫ್ ಓದದೇ ನೋಡುವುದರ ವಿಧಿ

*ಪ್ರ: ಮಸೀದಿಯಲ್ಲಿ ಕೆಲವರು ಮುಸ್‌ಹಫ್ ಕೈಗೆತ್ತಿಕೊಂಡು ತದೇಕ ಚಿತ್ತದಿಂದ ನೋಡುತ್ತಿರುತ್ತಾರೆ. ಅವರು ಕುರ್‌ಆನ್ ಓದುತ್ತಿದ್ದಾರೆ ಎನ್ನಲಾಗದು. ಕಾರಣ ಅವರ ತುಟಿಗಳು ಚಲಿಸುವುದಿಲ್ಲ. ಹೀಗೆ ತುಟಿ ಬಿಚ್ಚಿ ಕುರ್‌ಆನ್ ಪಠಿಸದೆ ಕೇವಲ ಮುಸ್‌ಹಫ್ ತೆರೆದು ಅದನ್ನು ನೋಡಿದರೆ ಪ್ರತಿಫಲವಿದೆಯೇ?*

ಉ: ಕುರ್‌ಆನ್ ಓದದೆ ಕೇವಲ ಅದರ ಅರ್ಥ ಗ್ರಹಿಸುವ ಮತ್ತು ಚಿಂತಿಸುವ ಉದ್ದೇಶದಿಂದ ಮುಸ್‌ಹಫ್ ಕೈಗೆತ್ತಿಕೊಂಡು ಕಣ್ಣೋಡಿಸುವುದಕ್ಕೆ ವಿರೋಧವಿಲ್ಲ. ಆದರೆ ಈ ಕ್ರಮ ಅನುಸರಿಸುವವರಿಗೆ ಕುರ್‌ಆನ್ ಓದಿದ ಪ್ರತಿಫಲ ದೊರೆಯಲಾರದು. ಓದುವಿಕೆ (ಕಿರಾಅತ್, ತಿಲಾವತ್) ಸಾಧಿತವಾಗಲು ತುಟಿ ಬಿಚ್ಚಿ ಉಚ್ಚರಿಸುವುದು ಅನಿವಾರ್ಯವಾಗಿದೆ.

## ನಹ್ಸ್ ಹಿಡಿದ ಕ್ಯಾಲೆಂಡರ್!

*ಪ್ರ: ಶರೀಅತ್ ಕಾಲೇಜೊಂದು ಪ್ರಕಟಿಸಿದ ಕ್ಯಾಲೆಂಡರ್‌ನಲ್ಲಿ ವರ್ಷದ ಹನ್ನೆರಡು ಮಾಸಗಳ ಪೈಕಿ ಹನ್ನೊಂದು ಮಾಸಗಳು ಹಾಗೂ 5ರಿಂದ 8ರ ವರೆಗಿನ ದಿನಗಳನ್ನು ನಹ್ಸ್‌ನ ದಿನಗಳ ಸಾಲಿಗೆ ಸೇರಿಸಲಾಗಿದೆ. ಅಷ್ಟೇ ಅಲ್ಲ ರಮದಾನ್ ತಿಂಗಳ ಎಂಟು ದಿನಗಳು ಮತ್ತು ದುಲ್‌ಹಜ್ಜ್ ಹತ್ತು ಕೂಡಾ ನಹ್ಸ್ ಎಂದು ಮುದ್ರಿಸಿದ್ದಾರೆ. ನಹ್ಸ್ ಎಂದರೆ ಏನು? ಇದಕ್ಕೆ ಆಧಾರವಿದೆಯೇ?*

ಉ: ನಹ್ಸ್ ಎಂಬುದಕ್ಕೆ ನತದೃಷ್ಟ, ಅಶುಭ, ದೌರ್ಭಾಗ್ಯ ಮುಂತಾದ ಅರ್ಥಗಳಿವೆ. ಕಡು ಧಿಕ್ಕಾರಿಗಳಾದ ಒಂದು ವಿಭಾಗದ ಜನರಿಗೆ ಶಿಕ್ಷೆ ನೀಡಲಾದ ದಿನಗಳನ್ನು ಪವಿತ್ರ ಕುರ್‌ಆನ್ "ನಹ್ಸ್"ನ ದಿನಗಳೆಂದು ಬಣ್ಣಿಸಿದೆ.

ಸತ್ಯವಿಶ್ವಾಸಿಗಳ ಪಾಲಿಗೆ ಯಾವ ದಿನವೂ ಅಶುಭ(ನಹ್ಸ್)ವಲ್ಲ, ಅಲ್ಲಾಹನೊಂದಿಗೆ ಮಾತ್ರ ಪ್ರಾರ್ಥಿಸುತ್ತಾ ಅವನ ಮೇಲೆ ಭಾರ ಹಾಕಿ ಅವನ ವಿಧಿ ನಿಯಮಗಳಿಗನುಸಾರವಾಗಿ ಬದುಕುವ ಸಜ್ಜನರಿಗೆ ಎಲ್ಲಾ ದಿನಗಳೂ ಶುಭ ದಿನಗಳಾಗಿವೆ.

ಅಂಧವಿಶ್ವಾಸಿಗಳಾದ ಪುರೋಹಿತರ ವೇಲೋಟದಲ್ಲಿ ತಯಾರಿಸಲಾಗುವ ದಿನದರ್ಶಿಗಳಲ್ಲಿ ನಹ್ಸ್ ದಿನಗಳ ಜತೆಗೆ ಅವರು ಪೂಜಿಸುವ ಸಮಸ್ತದ ನಾಯಕರ "ಆಂಡ್ ನೇರ್ಚೆ"ಗೆ ಉತ್ತೇಜಿಸುವ ಮರಣದ ದಿನಾಂಕಗಳನ್ನೂ ನಮೂದಿಸಿರುತ್ತಾರೆ. ಪವಿತ್ರ ರಮದಾನ್ ಮತ್ತು ದುಲ್‌ಹಜ್ಜ್ 10 ದಿನಗಳನ್ನು ಅಶುಭಕರವೆಂದು ಬರೆದಿರುವುದು ಅಪ್ಪಟ ಪೈಶಾಚಿಕ ಪ್ರವೃತ್ತಿಯಾಗಿದೆ. ಇಂತಹ ನಹ್ಸ್ ಅನ್ನು ಅಲ್ಲಾಹನಾಗಲೀ ಅವನ ಪ್ರವಾದಿಯಾಗಲೀ ನಮಗೆ ಕಲಿಸಿ ಕೊಟ್ಟಿರುವುದಿಲ್ಲ.

## ಮಯ್ಯಿತ್ ನಮಾಝ್‌ಗೆ ಬಾಂಗ್ ಬೇಕೇ?

*ಪ್ರ: ಮಯ್ಯಿತ್ ನಮಾಝ್‌ಗೆ ಅದ್ಹಾನ್ ಏಕಿಲ್ಲ?*

ಉ: ಮಯ್ಯಿತ್ ನಮಾಝ್ ನಿರ್ವಹಿಸುವ ಮೊದಲು ಪ್ರವಾದಿ(ಸ)ರವರು ಬಾಂಗ್ ಕರೆ ನೀಡಿಲ್ಲ ಮತ್ತು ಸಹಾಬಿಗಳಿಗೂ ಆ ಕಾರ್ಯ ಆದೇಶಿಸಿಲ್ಲ. ಆದುದರಿಂದ ಪ್ರವಾದಿ(ಸ)ರವರ ಅನುಯಾಯಿಗಳಾದ ನಾವು ಪ್ರವಾದಿ ಚರ್ಯೆಗೆ ಅನುಸಾರವಾಗಿಯೇ ಮಯ್ಯಿತ್ ನಮಾಝ್ ನಿರ್ವಹಿಸಬೇಕು. ಅದರಲ್ಲಿ ಇಲ್ಲದಿರುವುದನ್ನು ಸೇರ್ಪಡೆಗೊಳಿಸುವುದಾಗಲೀ ಇರುವುದನ್ನು ಕೈಬಿಡುವುದಾಗಲಿ ಮಾಡುವ ಅಧಿಕಾರ ಯಾರಿಗೂ ಇರುವುದಿಲ್ಲ.

## ಮದುವೆಗೆ ಲೋನ್

*ಪ್ರ: ನಾನು ಓರ್ವ ಯುವಕ, ಇಸ್ಲಾಮ್ ವಿರುದ್ಧ ಕಾರ್ಯ ಚಟುವಟಿಕೆಗಳೇ ಮೇಲುಗೈ ಪಡೆಯುತ್ತಿರುವ ಸಮಾಜದಲ್ಲಿ ಜೀವಿಸುತ್ತಿದ್ದೇನೆ. ಮದುವೆ ಆಲೋಚನೆ ಕೂಡಿಬಂದಿದೆ. ಅದರ ಖರ್ಚುವೆಚ್ಚ ಭರಿಸಲು ಹಣವಿಲ್ಲ.ದುದರಿಂದ ಬಡ್ಡಿ ಸಹಿತ ಲೋನ್ ಪಡೆಯುವುದರ ವಿಧಿಯೇನು?*

ಉ: ಬಡ್ಡಿಯು ಇಸ್ಲಾಮ್‌ನ ಪ್ರಕಾರ ನಿಷಿದ್ಧ. ಅದು ಅಲ್ಲಾಹು ಮತ್ತು ಅವನ ಸಂದೇಶವಾಹಕರ ವಿರುದ್ಧ ಯುದ್ಧ ಸಾರುವುದಕ್ಕೆ ಸಮಾನ. ಆದುದರಿಂದ ಈ ಅಧಾರ್ಮಿಕ ಕಾರ್ಯಕ್ಕೆ ಇಳಿಯುವ ಬದಲು ಪ್ರವಾದಿ(ಸ) ರವರ ಈ ಮಾತನ್ನು ಗಮನಿಸಿ.

"ಓ ಯುವ ಸಮೂಹವೇ, ನಿಮ್ಮಲ್ಲಿ ಯಾರಿಗೆ ವಿವಾಹವಾಗುವ ಸಾಮರ್ಥ್ಯವಿದೆಯೋ ಅಂತಹವರು ವಿವಾಹವಾಗಲಿ ಮತ್ತು ಯಾರಿಗೆ ಸಾಮರ್ಥ್ಯವಿಲ್ಲವೋ ಅವರು ವ್ರತಾನುಷ್ಠಾನ ಮಾಡಲಿ. ಅದು ಅವರನ್ನು ಸಂರಕ್ಷಿಸುವುದು" (ಹದೀಸ್).

ನಾನು ಅಲ್ಲಾಹನ ವಿಧಿ-ನಿಯಮಗಳಿಗೆ ಅನುಗುಣವಾಗಿ ನಡೆದರೆ ಅಲ್ಲಾಹು ನಮ್ಮೆಲ್ಲಾ ಸಮಸ್ಯೆಗಳಿಗೆ ಪರಿಹಾರ ನೀಡುವನು.

"ಯಾರು ಅಲ್ಲಾಹನಿಗೆ ತಕ್ವಾ ಮಾಡಿ ಬದುಕುತ್ತಾರೋ ಅಂತಹವರಿಗೆ ಅಲ್ಲಾಹು ಪರಿಹಾರ ಮಾರ್ಗ ತೆರೆದು ಕೊಡುವನು ಮತ್ತು ಅವರು ಬಯಸದ ಮಾರ್ಗದಲ್ಲಿ ಅವರಿಗೆ ಜೀವನಾಧಾರ ಒದಗಿಸಿ ಕೊಡುವನು" (65: 2, 3).

ಸಹೋದರ, ಇಸ್ಲಾಮ್ ಬೋಧಿಸಿದ ವಿವಾಹವೆನ್ನುವುದು ಅತ್ಯಂತ ಸರಳ. ಅದು ನಮ್ಮ ಕೈಲಾಗದಷ್ಟು ಖರ್ಚು ವೆಚ್ಚ ಮಾಡುವಂತೆ ಬೋಧಿಸುವುದಿಲ್ಲ. ಇಸ್ಲಾಮ್ ಪ್ರಣೀತ ವಿವಾಹ ಕಾರ್ಯ ಅದರ ವ್ಯಾಪ್ತಿಯೊಳಗೇ ನಡೆಯುವಂತಾದರೆ ಗಂಡಿನ ಕಡೆಯವರಿಗಾಗಲೀ ಹೆಣ್ಣಿನ ಕಡೆಯವರಿಗಾಗಲೀ ಕಿಂಚಿತ್ ತಲೆ ನೋವುಂಟಾಗುವುದಿಲ್ಲ.

# ಧರ್ಮನಿಷ್ಠ ಖಲೀಫರು

(4ನೇ ಪುಟದಿಂದ)

ಹರ್ರುತ್ ಉಮರ್ ಮತ್ತು ಅಲಿ(ರ) ಅಂದಿನ ಖಾಝಿ(ಜಡ್ಜ್)ಗಳಾಗಿದ್ದರು. ಅಬೂ ಉಬೈದ ಬಿನ್ ಜರ್ರಾಹ್(ರ)ರವರು ಖಜಾನಾಧಿಕಾರಿಯಾಗಿದ್ದರು. ಅಲಿ(ರ)ರವರು ಖಾಝಿ ಮತ್ತು ಮುಫ್ತಿ ಮಾತ್ರವಲ್ಲ, ಖಲೀಫರ ಕಾರ್ಯದರ್ಶಿಯಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರು. ಉಸ್ಮಾನ್(ರ)ರವರು ಪ್ರಧಾನ ಕಾರ್ಯದರ್ಶಿಯಾಗಿಯೂ ಖಲೀಫರಿಗಾಗಿ ಧಾರ್ಮಿಕ ಶಾಸನಗಳನ್ನು ದಾಖಲಿಸುವ ಆಪ್ತ ಬರಹಗಾರರಾಗಿಯೂ ಕರ್ತವ್ಯ ನಿರ್ವಹಿಸುತ್ತಿದ್ದರು. ಮಕ್ಕಾದ ಗವರ್ನರ್ ಆಗಿದ್ದ ಉತ್ಭಾ ಬಿನ್ ಉಸೈದ್(ರ) ಮತ್ತು ಅಬೂಬಕರ್(ರ)ರವರ ಮರಣ ಒಂದೇ ದಿನವಾಗಿತ್ತು.

ಅಬೂಬಕರ್(ರ) ನೇಮಿಸಿದ್ದ ಗವರ್ನರ್‌ಗಳು

ತಾಯಿಫ್ - ಉಸ್ಮಾನ್ ಬಿನ್ ಅಲ್‌ಆಸ್(ರ).

ಸನಾ - ಮುಹಾಜಿರ್‌ಬ್ನು ಉಮಯ್ಯಾ(ರ).

ಹದರ್ ಮೌತ್ - ಝ್ಯಾದ್‌ಬ್ನು ಉಬೈದ್(ರ).

ಖೋಲಾನ್ (ಯಮನ್‌ನ ಒಂದು ಭಾಗ - ಯಅ್‌ಲಾ ಬಿನ್ ಉಬೈದ್(ರ).

ದಕ್ಷಿಣ ಯಮನ್ - ಅಬೂ ಮೂಸಲ್ ಅಶ್‌ಅರಿ(ರ).

ಜನಾದ್ (ಯಮನ್‌ನ ಒಂದು ಭಾಗ) ಮುಆದ್‌ಬ್ನು ಜಬಲ್(ರ).

ಬಹ್ರೈನ್ - ಅಲಾ ಬಿನ್ ಅಲ್ ಹದ್ರಮಿ(ರ).

ದಾಮತುಲ್ ಜಂದಲ್ (ಇರಾಕ್) - ಇಯಾದ್‌ಬ್ನು ಘನಮ್(ರ).

ಇರಾಕ್ - ಮುತನಾಬಿನ್ ಹಾರಿಸ್(ರ).

ನೈರಾನ್ - ಜರೀರ್‌ಬ್ನು ಅಬ್ದುಲ್ಲಾಹ್(ರ).

ಅಬೂಬಕರ್(ರ)ರವರು ತನ್ನ ಆಡಳಿತಾವಧಿಯ ಕೊನೆಯಲ್ಲಿ ಸಿರಿಯಾದ ದಂಡನಾಯಕರನ್ನಾಗಿ ಅಬೂ ಉಬೈದ್‌ಬ್ನು ಅಲ್ ಜರ್ರಾಹ್, ಯಾಸೀರ್‌ಬ್ನು ಅಬೂ ಸುಫ್ಯಾನ್, ಅಮ್ರ್‌ಬ್ನು ಅಲ್ ಆಸ್ ಮತ್ತು ಶುರಾಹ್ ಬೀಲ್‌ಬ್ನು ಹಸ್ನಾ(ರ)ರನ್ನು ನೇಮಿಸಿದ್ದರು. ಹರ್ರುತ್ ಖಾಲಿದ್‌ಬ್ನು ವಲೀದ್(ರ)ರವರು ದಂಡನಾಯಕರ ನೇತಾರರಾಗಿದ್ದರು.

(ಮುಂದುವರಿಯುವುದು)

# ನಮ್ಮ ನೆರೆಹೊರೆಯವರು ನಮ್ಮಿಂದ ನಿರ್ಭೀತರೇ?

"ನೀವು ಅಲ್ಲಾಹನನ್ನು ಆರಾಧಿಸಿರಿ. ಅವನೊಡನೆ ಯಾರನ್ನೂ ಸಮಾನರನ್ನಾಗಿಸದಿರಿ. ತಾಯ್ತಂದೆಯರೊಡನೆ ಒಳ್ಳೆಯ ರೀತಿಯಲ್ಲಿ ವರ್ತಿಸಿರಿ. ಬಂಧುಗಳಲ್ಲಿ, ಅನಾಥರಲ್ಲಿ, ಬಡವರಲ್ಲಿ, ಕುಟುಂಬ ಸಂಬಂಧವುಳ್ಳ ನೆರೆಹೊರೆಯವರಲ್ಲಿ, ಇತರ ನೆರೆಹೊರೆಯವರಲ್ಲಿ, ಸಹವಾಸಿಗಳಲ್ಲಿ, ದಾರಿಹೋಕರಲ್ಲಿ, ನಿಮ್ಮ ಬಲಗೈಗಳು ವಶಪಡಿಸಿದ ಗುಲಾಮರಲ್ಲಿ ನೀವು ಒಳ್ಳೆಯ ರೀತಿಯಲ್ಲಿ ವರ್ತಿಸಿರಿ. ಅಹಂಭಾವಿಯನ್ನೂ ದುರಭಿಮಾನಿಯನ್ನೂ ಅಲ್ಲಾಹು ಯಾವತ್ತೂ ಮೆಚ್ಚುವುದಿಲ್ಲ" (ಕುರ್‌ಆನ್ 4:36).

ಯಥಾರ್ಥ ಮುಸ್ಲಿಮನಿಗೆ ತಂದೆ, ತಾಯಿ, ಬಂಧುಗಳು, ಅನಾಥರು, ಬಡವರು, ನೆರೆಹೊರೆಯವರು, ಗುಲಾಮರು, ಸೇವಕರು, ಆಪ್ತಸಂಬಂಧವುಳ್ಳವರೆಂದು ತಿಳಿದು ಅವರೊಡನೆ ಉತ್ತಮ ಸಂಬಂಧವಿರಿಸುವುದು ಕರ್ತವ್ಯವೆಂಬುದನ್ನು ಕುರ್‌ಆನ್ ಎತ್ತಿ ತೋರಿಸಿದೆ. ಕೆಲವೊಮ್ಮೆ ಸ್ವಂತ ಕುಟುಂಬಿಕರಿಗಿಂತಲೂ ಹೆಚ್ಚಾಗಿ ನೆರೆಹೊರೆಯವರು ಸಹಾಯಕ್ಕೆ ಬರುತ್ತಾರೆ. ಆಕಸ್ಮಿಕ ಸಂದರ್ಭಗಳಲ್ಲಿ ಓಡಿ ಬರುವವರು, ಅನಿರೀಕ್ಷಿತವಾಗಿ ಅಗತ್ಯಕ್ಕೆ ಬೀಳುವವರು ನೆರೆಹೊರೆಯವರು. ಪ್ರವಾದಿ(ಸ) ಹೇಳಿದರು: "ನೆರೆಹೊರೆಯವರ ಬಗ್ಗೆ ಜಿಬ್‌ರೀಲ್(ಅ) ಆಗಾಗ ನನಗೆ ಉಪದೇಶ ನೀಡುತ್ತಿದ್ದರು. ಕೊನೆಗೆ ನೆರೆಹೊರೆಯವರಿಗೆ ಸಂಪತ್ತಿನಲ್ಲಿ ಕೂಡಾ ಉತ್ತರಾಧಿಕಾರಿಯಾಗುವ ಅವಕಾಶ ಉಂಟಾದೀತೋ ಎಂಬ ಸಂದೇಹ ನನಗಿದೆ (ಬುಖಾರಿ, ಮುಸ್ಲಿಮ್). ಯಾರು ಅಲ್ಲಾಹನಲ್ಲೂ ಅಂತ್ಯದಿನದಲ್ಲೂ ವಿಶ್ವಾಸವಿಡುವರೋ, ಅವರು ತಮ್ಮ ನೆರೆಹೊರೆಯವರೊಡನೆ ಉತ್ತಮ ರೀತಿಯಲ್ಲಿ ವರ್ತಿಸಲಿ. ಇದು ಮುಸ್ಲಿಮರ ಜೀವನದ ಒಂದು ಮುಖ್ಯ ಭಾಗವೆಂಬುದನ್ನು ತಿಳಿಯಬಹುದು.

ಆದರೆ ಇಂದಿನ ಸ್ಥಿತಿಯೇ ಬೇರೆ. ತನ್ನ ಅಕ್ಕಪಕ್ಕದ ಮನೆಯಲ್ಲಿ ಯಾರಿದ್ದಾರೆ ಎಂಬುದೇ ತಿಳಿಯದಂತಹ ಪರಿಸ್ಥಿತಿಯಿದೆ. ಮಾನವೀಯ ಸಂಬಂಧಗಳು ಶಿಥಿಲಗೊಳ್ಳುತ್ತಾ, ಪರಸ್ಪರ ದುರುಗುಟ್ಟುವ ಸ್ವಾರ್ಥ ಜೀವನಕ್ಕಾಗಿ, ಪರಸ್ಪರ ದ್ವೇಷಿಸುವ ವಿಚಿತ್ರ ಸನ್ನಿವೇಶಗಳು ಬೆಳೆಯುತ್ತಿವೆ. ಇಂದು, ಮನೆಯ ವಠಾರದ ಗೋಡೆಗಳನ್ನು ಎತ್ತರಕ್ಕೇರಿಸಿ, ಕೋಟೆ ಕಟ್ಟಿಸುವ ಸ್ಥಿತಿಯಿದೆ. ಪಕ್ಕದ ಮನೆಯಿಂದ ಯಾವಾಗ ಅಪಾಯ ಬರುವುದೋ ಎಂಬ ಭಯ. ಅಕ್ಕಪಕ್ಕದ ಮನೆಯವರು ಯಾರು? ಅವರ ಕಸುಬೇನು? ಅವರು ಹೇಗಿದ್ದಾರೆ? ಎಂಬುದನ್ನು ತಿಳಿಯುವ ಗೋಜಿಗೇ ಹೋಗಲಾರರು. ಅವರು ತಮಗೆ ವೈರಿಗಳಾಗಬಹುದು. ಅವರಿಂದ ಅಪಾಯ ಬರಬಹುದೆಂಬ ಸಂದೇಹ ತುಂಬಿರುತ್ತದೆ. ಅದಕ್ಕಾಗಿ ಗೋಡೆ ಕಟ್ಟುವ ಕೆಲಸ. ಇದು ಕಾಲದ ವೈಪರೀತ್ಯವೇ ವಿನಾ ಶಾಶ್ವತ ಪರಿಹಾರವಲ್ಲ.

ನೆರೆಹೊರೆಯವರೊಡನೆ ಮಾತನಾಡಲಾರರು. ಮನೆ ಜಗಲಿಯತ್ತ ಹೋಗಲು ಬಿಡಲಾರರು. ತುಚ್ಛ ಕಾರಣಕ್ಕಾಗಿ ಜಗಳ ಕಾಯುವರು. ರಕ್ತ ಹರಿಸಲೂ ಕೂಡಾ ಸಿದ್ಧ. ಇದೆಲ್ಲಾ ಇಸ್ಲಾಮಿನ ನೈಜ ಸಿದ್ಧಾಂತಗಳನ್ನು



ತಿಳಿಯದೆ ಮಾಡುವ ಅಪರಾಧಗಳಾಗಿವೆ. ಪ್ರವಾದಿ(ಸ) ಹೇಳಿದ ಉಪದೇಶ ತಮ್ಮ ನೆರೆಹೊರೆಯವನು ತನ್ನ ಮರದ ತುಂಡನ್ನು ತಮ್ಮ ಗೋಡೆಯ ಮೇಲೆ ಇಟ್ಟರೆ ಅದನ್ನು ತಡೆಯಬಾರದು" (ಬುಖಾರಿ, ಮುಸ್ಲಿಮ್). ಇದು ಅನ್ಯೋನ್ಯತೆ. ತನ್ನ ಹಾಗೆಯೇ ನೆರೆಹೊರೆಯವರ ಜೀವನವೂ ಸುಗಮವಾಗಿರಬೇಕೆಂಬ ಅಭಿಲಾಷೆಯೇ ಉತ್ತಮ ವರ್ತನೆಯ ಅಡಿಪಾಯ. ಅಗತ್ಯ ಬಿದ್ದಾಗಲೆಲ್ಲಾ ಸಹಾಯ ನೀಡುವುದು ತನ್ನ ಕರ್ತವ್ಯವೆಂದು ವಿಶ್ವಾಸಿಯಾದ ಮುಸ್ಲಿಮ್ ತಿಳಿದುಕೊಳ್ಳಬೇಕು. ಅವರ ಮೇಲೆ ಸಹಾನುಭೂತಿ, ಕರುಣೆ ಸದಾ ಇರಬೇಕು .ನೆರೆಹೊರೆಯವನು ಆಹಾರವಿಲ್ಲದೆ ಉಪವಾಸ ಬೀಳುತ್ತಿರುವಾಗ, ಹೊಟ್ಟೆ ತುಂಬಾ ಉಣ್ಣುವಾತನು ನನ್ನವನಲ್ಲ ಎಂದು ಪ್ರವಾದಿ(ಸ)ರು ಘೋಷಿಸಿರುವುದು ಮುಸ್ಲಿಮರ ಕರ್ತವ್ಯವನ್ನು ತೋರಿಸಲಿಕ್ಕಾಗಿಯೇ ಆಗಿದೆ. ನೆರೆಹೊರೆಯವರನ್ನು ಪ್ರೀತಿಸಬೇಕು. ಅವರ ಕಷ್ಟ ಸುಖಗಳಲ್ಲಿ ಭಾಗಿಯಾಗಬೇಕು. ಅವರಿಗೆ ಸದಾ ನೆರವಾಗಬೇಕು. ಅರಮನೆಗಳನ್ನೋ ಮಹಡಿಗಳನ್ನೋ ನಿರ್ಮಿಸಿ, ಸಂಪನ್ನರಾಗಿ ಮೆರೆಯುವ ಶ್ರೀಮಂತರು, ನೆರೆಹೊರೆಯಲ್ಲಿ ಗುಡಿಸಲುಗಳಲ್ಲಿ ವಾಸಿಸುವ ಬಡವರನ್ನು ಕಡೆಗಣಿಸುತ್ತಾರೆ. ಅಂತಹವರನ್ನು ಕರೆದು ಪ್ರವಾದಿ(ಸ) ಉಪದೇಶಿಸಿದ್ದಾರೆ. "ಹೇ! ಅಬೂದರ್! ನೀನು ಸಾರು ಪಲ್ಯಗಳನ್ನು ಪಾಕ ಮಾಡಿದರೆ ಸ್ವಲ್ಪ ನೀರನ್ನು ಹೆಚ್ಚು ಸೇರಿಸಿಯಾದರೂ ನಿನ್ನ ನೆರೆಹೊರೆಯವರನ್ನು ಪರಿಗಣಿಸು" (ಮುಸ್ಲಿಮ್). ನಿನ್ನ ಆಹಾರ ಪದಾರ್ಥಗಳ ಪರಿಮಳದಿಂದ ನಿನ್ನ ನೆರೆವಾಸಿಗಳನ್ನು ಉಪದ್ರವಿಸಬೇಡ (ತ್ವಬ್ರಾನಿ). ಈ ಹದೀಸಿನಿಂದ ಮಾಂಸಾಹಾರಗಳನ್ನು ತಯಾರಿಸುವಾಗ ಹಬ್ಬುವ ಪರಿಮಳದಿಂದ ನೆರೆವಾಸಿಗಳಲ್ಲಿ ಆಸೆ ಹುಟ್ಟುತ್ತದೆ. ಅದೊಂದು ರೀತಿಯ ಉಪದ್ರವೇ ಆಗಿದೆ ಎಂಬ ಸೂಚನೆಯನ್ನು ಗಮನಿಸಬಹುದು. ಹಸಿವನ್ನು ನೀಗಿಸುವಷ್ಟು ಆಹಾರ ಕೂಡಾ ಇಲ್ಲದಿರುವ ನೆರೆವಾಸಿಗಳಿರುವಾಗ ಅವರನ್ನು ಕಡೆಗಣಿಸಿ, ಔತಣಕೂಟ ಏರ್ಪಡಿಸುವುದನ್ನು ಪ್ರವಾದಿ(ಸ)ರವರು ನಿಷೇಧಿಸಿದ್ದಾರೆ. ಆಹಾರದ ಅಗತ್ಯವಿರುವವರನ್ನು ಆಹ್ವಾನಿಸದೆ, ಆಹಾರದ ಅಗತ್ಯವಿಲ್ಲದ ಶ್ರೀಮಂತರನ್ನು ಮಾತ್ರ ಆಹ್ವಾನಿಸಿ, ಕೊಡುವ ಔತಣಕ್ಕಿಂತ ನೀಚ ಔತಣ ಬೇರೆಯಿಲ್ಲ (ಮುಸ್ಲಿಮ್). ಶ್ರೀಮಂತ ಬಡವನೆಂಬ ಬೇಧವಿಲ್ಲದೆ, ನೆರೆಹೊರೆಯವರಲ್ಲಿ ಸಮಾನತೆ ಪಾಲಿಸುವುದೂ ಅವಶ್ಯಕತೆಗಳನ್ನೂ ಪರಿಗಣಿಸುವುದೂ ಇಸ್ಲಾಮೀ ಜೀವನವಾಗಿದೆ.

ನೆರೆಹೊರೆಯವರಿಗಾಗಿ ಸಹಾಯ ಮಾಡುವುದು, ಪರಸ್ಪರ ಪ್ರೀತಿಯಿಂದ ಇರುವುದು ಅಗತ್ಯ. ಅವರು ಕೊಡುವ ದಾನವನ್ನು ತುಚ್ಛವಾಗಿ ಪರಿಗಣಿಸಬಾರದು. ಪ್ರವಾದಿ(ಸ) ರವರು ಹೇಳಿದರು: ಮುಸ್ಲಿಮ್ ಸ್ತ್ರೀಯರೇ! ನೀವು ನಿಮ್ಮ ನೆರೆವಾಸಿಗಳು ಕೊಡುವ ದಾನವನ್ನು ತುಚ್ಛವಾಗಿ ತಿಳಿಯಬೇಡಿ, ಕಡೆಗಣಿಸಬೇಡಿ. ಅದು ಆಡಿನ ಕೊಂಬಾದರೂ ಸರಿ (ಬುಖಾರಿ, ಮುಸ್ಲಿಮ್). ನೆರೆಹೊರೆಯವರು ಯಾವ ಧರ್ಮದವರಾದರೂ ಅವರೊಡನೆ ಉತ್ತಮ ಸಂಬಂಧ ಇರಿಸಬೇಕು. ಅಬ್ದುಲ್ಲಾ ಬಿನ್ ಅಮ್ರ್(ರ) ಒಂದು ಆಡನ್ನು ಮಾಂಸ ಮಾಡುವಾಗ ತನ್ನ ಸೇವಕನನ್ನು ಕರೆದು, "ನೀನು ಅದರಿಂದ ಒಂದು ಪಾಲನ್ನು ನಮ್ಮ ನೆರೆವಾಸಿಯಾದ ಯಹೂದಿಗೆ ಕೊಟ್ಟಿಲ್ಲವೇ? ಎಂದು ಕೇಳಿದರು. ಹೀಗೆ ಎರಡು ಬಾರಿ ಕೇಳಿದ ಮೇಲೆ ಅವರು ಪ್ರವಾದಿ ವಚನವನ್ನು ಹೇಳಿದರು: "ಅಲ್ಲಾಹನ ಬಳಿ ಉತ್ತಮನು, ತನ್ನವರಲ್ಲಿ ಉತ್ತಮವಾಗಿ ವರ್ತಿಸುವವನು, ನೆರೆವಾಸಿಗಳಲ್ಲಿ ಉತ್ತಮವಾಗಿ ವರ್ತಿಸುವವನು ಮತ್ತು ಬಂಧುತ್ವವನ್ನು ಬೆಳೆಸುವವನಾಗಿದ್ದಾನೆ (ತಿರ್ಮುದಿ). ಯಾವ ಧರ್ಮದವನೇ ಆಗಿರಲಿ, ಅವರೊಡನೆ ಉತ್ತಮ ಬಾಂಧವ್ಯ ಬೆಳೆಸುವುದು ಮುಸ್ಲಿಮನ ಕರ್ತವ್ಯ. "ಮುಸ್ಲಿಮನ ಜೀವನದಲ್ಲಿ ಉತ್ತಮ ನೆರೆಹೊರೆ, ವಿಶಾಲವಾದ ಮನೆ, ಉತ್ತಮ ವಾಹನವಿರುವುದು ಬಹುದೊಡ್ಡ ಸೌಭಾಗ್ಯವಾಗಿದೆ" (ಅಹಮ್ಮದ್).

ನೆರೆವಾಸಿಗಳೊಡನೆ ಜಗಳವಾಡುವುದು, ಉಪದ್ರವಿಸುವುದು ಸತ್ಯವಿಶ್ವಾಸಿಯಾದ ಮುಸ್ಲಿಮನ ಲಕ್ಷಣವಲ್ಲ. ಪ್ರವಾದಿ(ರ)ರವರು ಹೇಳಿದರು: "ಅಲ್ಲಾಹನಾಣೆ, ಅವನು ವಿಶ್ವಾಸಿಯಲ್ಲ" (ಅಂದರೆ ಮುಸ್ಲಿಮನಲ್ಲ). ಆಗ ಸಹಾಬಿ ಕೇಳಿದರು "ಯಾರು ಪ್ರವಾದಿವರ್ಯರೇ?" ಯಾರ ವಿಷಯದಲ್ಲಿ ನೆರೆವಾಸಿಗಳು ನಿರ್ಭೀತರಾಗಿರಲು ಸಾಧ್ಯವಿಲ್ಲವೋ ಅವರು". ನೆರೆವಾಸಿಗಳಿಗೆ ಕಿರುಕುಳ ಕೊಡುವವರು, ಭಯ ಹುಟ್ಟಿಸುವವರು ವಿಶ್ವಾಸಿಗಳಲ್ಲ ಎಂಬುದನ್ನು ಈ ಹದೀಸ್ ತಿಳಿಸುತ್ತದೆ. ಓರ್ವರು ಪ್ರವಾದಿ(ಸ)ಯವರೊಡನೆ ಕೇಳಿದರು: ನೆರೆವಾಸಿಗಳೊಡನೆ ನನಗಿರುವ ಕರ್ತವ್ಯಗಳೇನು?" ಪ್ರವಾದಿ(ಸ) ಹೇಳಿದರು: "ರೋಗಿಯಾದಾಗ ಸಂದರ್ಶಿಸಿರಿ, ಮರಣ ಹೊಂದಿದಾಗ ಅಂತ್ಯಸಂಸ್ಕಾರಗಳಲ್ಲಿ ಪಾಲ್ಗೊಳ್ಳಿರಿ, ಸಾಲ ಕೇಳಿದರೆ ನೀಡಿರಿ. ಒಳಿತಾದಾಗ ಶುಭ ಕೋರಿರಿ, ಕಷ್ಟ-ನಷ್ಟಗಳಾದಾಗ ಸಮಾಧಾನ ಪಡಿಸಿರಿ. ಅವನಿಗೆ ಗಾಳಿಯ ಸಂಚಾರಕ್ಕೆ ಆತಂಕವಾಗುವಂತೆ ನಿಮ್ಮ ಕಟ್ಟಡ, ಗೋಡೆ ಕಟ್ಟಬೇಡಿರಿ. ಆಹಾರ ಪದಾರ್ಥಗಳ ಪರಿಮಳದ ಮೂಲಕ ಅವರನ್ನು ಉಪದ್ರವಿಸದಿರಿ. ನಿಮ್ಮಲ್ಲಿ ಹಣ್ಣುಗಳಿದ್ದರೆ ಅವರಿಗೂ ಕೊಡಿರಿ. ಅವರಿಗೆ ಹಂಚಲು ಸಾಧ್ಯವಾಗದೆ ಇದ್ದರೆ, ನಿಮ್ಮ ಮನೆಯೊಳಗೆ ರಹಸ್ಯವಾಗಿಯೇ ಬಳಸಿರಿ. ನಿಮ್ಮ ಮಕ್ಕಳು ನೆರೆಯ ಮಕ್ಕಳೆದುರು ತಿಂಡಿ ಹಣ್ಣುಹಂಪಲುಗಳನ್ನು ತಿನ್ನುತ್ತಾ ಆಸೆ ಹುಟ್ಟಿಸಬಾರದು" (ತ್ವಬ್ರಾನಿ). ಇದು ನೆರೆವಾಸಿಗಳೊಡನೆ ಮಾಡುವ ಸದ್ವರ್ತನೆಗಳು. ಒಳಿತಿನಲ್ಲಿ ಭಾಗಿಯಾಗುವುದು, ಕೆಡುಕಿನಿಂದ ದೂರವಾಗಲು ಸಹಕರಿಸುತಿವುದು ಪ್ರತಿಯೋರ್ವನ ಕರ್ತವ್ಯ. ಅಸೂಯೆ, ಹಗೆ, ದ್ವೇಷವನ್ನು ಕಿತ್ತು ಹಾಕಿ, ಪ್ರೀತಿ, ವಾತ್ಸಲ್ಯಗಳನ್ನು ಬೆಳೆಸುವುದೇ ಉತ್ತಮ ಜೀವನ. ಸದ್ವರ್ತನೆ, ಪ್ರೀತಿಯ ಸಂಬಂಧ, ಪರಸ್ಪರ ಸಹಾಯ ನೀಡುವ ಮೂಲಕ ಮುಸ್ಲಿಮರ ಜೀವನ ಮಾದರಿಯನ್ನು ತಿಳಿಸುವಂತಾಗಬೇಕು. ಅನ್ಯ ಧರ್ಮದವರು ಕೂಡಾ ತಮಗೆ ಮುಸ್ಲಿಮ್ ನೆರೆಹೊರೆಯವರೇ ದೊರಕುವಂತಾಗಲೆಂದು ಆಸೆ ಪಡುವಂತೆ ಮುಸ್ಲಿಮನ ಜೀವನ ಪದ್ಧತಿ ಇರಬೇಕು. ●




✍ ಪ್ರೊ ಪಿ. ಅಬ್ದುಲ್ಲ. ಕನ್ನಡಕ್ಕೆ: ಇಬ್‌ನು ಮೊಹಿದ್ದೀನ್

## ಪ್ರಾರ್ಥನೆ ಮತ್ತು ಶಿಷ್ಟಾಚಾರಗಳು

**ಮಧ್ಯವರ್ತಿಯ ಅಗತ್ಯವಿಲ್ಲ:**

ಅತ್ಯುನ್ನತನಾದ ಅಲ್ಲಾಹು ಹೇಳುತ್ತಾನೆ:

وَقَالَ رَبُّكُمُ ادْعُونِيٓ أَسْتَجِبْ لَكُمْ ۚ إِنَّ الَّذِينَ يَسْتَكْبِرُونَ عَنْ عِبَادَتِي سَيَدْخُلُونَ جَهَنَّمَ دَاخِرِينَ ﴿٦٠﴾

"(ಓ ಜನರೇ) ನಿಮ್ಮ ಪ್ರಭು (ಹೀಗೆ) ಹೇಳುತ್ತಾನೆ: ನೀವು ನನ್ನೊಂದಿಗೆ ಪ್ರಾರ್ಥಿಸಿರಿ, ನಾನು ನಿಮಗೆ ಉತ್ತರಿಸುವೆನು. ನನ್ನನ್ನು ಆರಾಧಿಸುವುದರ ಕುರಿತು ಅಹಂಭಾವ ತೋರಿಸುವವನು ಖಂಡಿತವಾಗಿಯೂ ಅಪಮಾನಿತನಾಗಿ ನರಕಕ್ಕೆ ಪ್ರವೇಶಿಸುವನು" (ಕುರ್‌ಆನ್ 40:60)

وَإِذَا سَأَلَكَ عِبَادِي عَنِّي فَإِنِّي قَرِيبٌ ۖ أُجِيبُ دَعْوَةَ الدَّاعِ إِذَا دَعَانِ فَلْيَسْتَجِيبُوا لِي وَلْيُؤْمِنُوا بِي لَعَلَّهُمْ يَرْشُدُونَ ﴿١٨٦﴾

"(ಪ್ರವಾದಿಯವರೇ), ನನ್ನ ದಾಸನು ನನ್ನ ಬಗ್ಗೆ ನಿಮ್ಮೊಡನೆ ಕೇಳಿದರೆ ಖಂಡಿತವಾಗಿಯೂ ನಾನು (ಅವರಿಗೆ) ನಿಕಟವಾಗಿದ್ದೇನೆ ಎಂದು ಹೇಳಿರಿ. ನನ್ನನ್ನು ಕರೆ(ದು ಪ್ರಾರ್ಥಿಸಿ)ದರೆ ನಾನು ಕರೆಯು(ಕರೆದು ಪ್ರಾರ್ಥಿಸು)ವವನ ಕರೆಗೆ (ಪ್ರಾರ್ಥನೆಗೆ)ಉತ್ತರಿಸುವೆನು. ಆದುದರಿಂದ ಅವರು ನನಗೆ (ನನ್ನ ಕರೆಗೆ) ಉತ್ತರಿಸಲಿ ಮತ್ತು ನನ್ನಲ್ಲಿ ವಿಶ್ವಾಸವಿಡಲಿ. (ಹಾಗಿದ್ದಲ್ಲಿ) ಅವರು ನೇರವಾದ ಹಾದಿಯನ್ನು ಪಡೆಯಬಹುದು" (ಕುರ್‌ಆನ್ 2:186).

**ಪ್ರಾರ್ಥಿಸಿದುದರ ಪ್ರತಿಫಲ:**

ಪ್ರವಾದಿ(ಸ)ರು ಹೇಳಿದರು: "ಓರ್ವ ಮುಸ್ಲಿಮ್ ಪಾಪಮುಕ್ತವಾದ ಅಥವಾ ಆಪ್ತ ಸಂಬಂಧವನ್ನು ಮುರಿಯದ ಯಾವುದಾದರೂ ಪ್ರಾರ್ಥನೆಯನ್ನು ನಡೆಸುವುದಾದರೆ ಅಲ್ಲಾಹು ಅವನಿಗೆ ಮೂರರಲ್ಲೊಂದು ಕಾರ್ಯವನ್ನು ಮಾಡಿ ಕೊಡದಿರಲಾರ. ಒಂದೋ ಅವನು ಪ್ರಾರ್ಥಿಸಿದ ವಿಷಯವನ್ನು ಅವನಿಗೆ ಶೀಘ್ರವೇ ನೆರವೇರಿಸಿ ಕೊಡುವನು. ಅಥವಾ ಅದನ್ನು ಅವನಿಗಾಗಿ ಪರಲೋಕಕ್ಕೆ ಕಾದಿರಿಸುವನು. ಅಥವಾ ಅದರಷ್ಟು ಕೆಡುಕುಗಳನ್ನು ಅವನಿಂದ ತಿರುಗಿಸಿ ಬಿಡುವನು" (ಅಹ್ಮದ್). ನಾನು ಪ್ರಾರ್ಥಿಸಿ ಪ್ರಾರ್ಥಿಸಿ ನನಗೆ ಉತ್ತರ ಸಿಗುವುದು ಕಾಣಿಸುತ್ತಿಲ್ಲ ಎಂದು ಹೇಳುವುದು, ಹಾಗೆ ಪ್ರಾರ್ಥನೆಯನ್ನು ಕುಂಠಿತಗೊಳಿಸುತ್ತಾ ಕೊನೆಗೆ ಪ್ರಾರ್ಥಿಸುವುದನ್ನೇ ಬಿಟ್ಟು ಬಿಡುವುದಿದೆ. (ಮುಸ್ಲಿಮ್)

**ಪ್ರಾರ್ಥನೆಯ ಶಿಷ್ಟಾಚಾರಗಳು:**

ವುದೂ ನಿರ್ವಹಿಸುವುದು, ಕಾಲಿನ ಮಂಡಿಗಳನ್ನು ಸೇರಿಸಿ ಖಿಬ್ಲಕ್ಕೆ ನೇರವಾಗಿ ದೈನ್ಯತೆಯೊಂದಿಗೆ ಕುಳಿತುಗೊಳ್ಳಬೇಕು. ಭಯ, ಭಕ್ತಿಯಿಂದ ಅಲ್ಲಾಹನೊಂದಿಗೆ ಮಾತ್ರ ಪ್ರಾರ್ಥಿಸಬೇಕು.

الْحَمْدُ لِلَّهِ رَبِّ الْعَالَمِينَ ಎಂದು ಅಲ್ಲಾಹನನ್ನು ಸ್ತುತಿಸುತ್ತಾ ಪ್ರಾರಂಭಿಸಬೇಕು.

وَالصَّلَاةُ وَالسَّلَامُ عَلَى رَسُولِهِ الأمين ಬಳಿಕ ಪ್ರವಾದಿ(ಸ) ರ ಮೇಲೆ ಸಲಾತ್ ಹೇಳಬೇಕು. ಉತ್ತರ ಲಭಿಸುತ್ತದೆಯೆಂಬ ದೃಢ ವಿಶ್ವಾಸವಿರಬೇಕು. ಸುಖದಲ್ಲೂ ದುಃಖದಲ್ಲೂ ಪ್ರಾರ್ಥಿಸಬೇಕು. ಮಾಡಿದ ತಪ್ಪುಗಳ ಕುರಿತು ಪಶ್ಚಾತ್ತಾಪ ಪಡಬೇಕು. ಅನುಗ್ರಹಗಳನ್ನು ಅರಿತುಕೊಂಡು ಅದಕ್ಕಾಗಿ ಕೃತಜ್ಞತೆ ಸಲ್ಲಿಸಬೇಕು. ಇತರರಿಗಾಗಿ ಪ್ರಾರ್ಥಿಸುವಾಗ ಮೊದಲು ತನಗಾಗಿ ಪ್ರಾರ್ಥಿಸಬೇಕು. ಅಲ್ಲಾಹನ ಉತ್ಕೃಷ್ಟ ನಾಮಗಳಿಂದ ಅಥವಾ ಉನ್ನತ ವಿಶೇಷಣಗಳಿಂದ ಪ್ರಾರ್ಥಿಸುವವರು ತನ್ನ ಸತ್ಕರ್ಮಗಳನ್ನು ಮುಂದಿಟ್ಟು ಅಲ್ಲಾಹನೊಡನೆ ತವಸ್ಸುಲ್ ಮಾಡಬೇಕು. ಪ್ರಾರ್ಥಿಸುವವನ ಆಹಾರ, ಬಟ್ಟೆ ಬರೆ ಹಲಾಲ್ ಆಗಿರಬೇಕು. ಒಳಿತನ್ನು ಆದೇಶಿಸಲಿಕ್ಕಾಗಿ ಮತ್ತು ಕೆಡುಕನ್ನು ವಿರೋಧಿಸಲಿಕ್ಕಾಗಿ ಪ್ರಾರ್ಥಿಸಿರಿ. ಕುಟುಂಬ ಹಾಗೂ ಮಕ್ಕಳ ವಿರುದ್ಧವಾಗಿ ಅಥವಾ ಕುಟುಂಬ ಸಂಬಂಧ ಮುರಿಯಲಿಕ್ಕಾಗಿ ಅಥವಾ ಆರ್ಥಿಕ ನಷ್ಟ, ಆಯಸ್ಸು, ಕಡಿತ, ನಾಶನಷ್ಟ, ಮುಂತಾದವುಗಳಿಗಾಗಿ ಪ್ರಾರ್ಥಿಸಬಾರದು. ಕೊನೆಯಲ್ಲಿ الْحَمْدُ لِلَّهِ رَبِّ الْعَالَمِينَ ಎಂದು ಅಲ್ಲಾಹನನ್ನು ಸ್ತುತಿಸಬೇಕು.

وَصَلَّى اللهُ تَعَالَى عَلَى نَبِيِّنَا مُحَمَّدٍ ﷺ وَعَلَى آلِهِ وَصَحْبِهِ أَجْمَعِينَ

ಬಳಿಕ ಪ್ರವಾದಿ(ಸ)ರ ಮೇಲೆ ಸಲಾತ್ ಹೇಳಬೇಕು. ಏಕೆಂದರೆ

قَالَ عُمَرُ رَضِيَ اللهُ عنه : إِنَّ الدُّعَاءَ مَوْقُوفٌ بَيْنَ السَّمَاءِ وَالأرْضِ يَصْعَدُ مِنْهُ شَيْءٌ حَتَّى تُصَلِّي عَلَى نَبِيِّكَ .(الترمذي)

ಉಮರ್(ರ)ರು ಹೇಳಿದರು: "ನೀನು ನಿನ್ನ ಪ್ರವಾದಿಯವರ ಹೆಸರಲ್ಲಿ ಸಲಾತ್ ಹೇಳುವ ವರೆಗೆ ನಿನ್ನ ಪ್ರಾರ್ಥನೆಯು ಆಕಾಶ-ಭೂಮಿಗಳ ನಡುವೆ ತಂಗಿ ನಿಲ್ಲುತ್ತದೆ. ಅದರಲ್ಲಿ ಒಂದಕ್ಷರ ಕೂಡಾ ಅಲ್ಲಾಹನೆಡೆಗೆ ಏರಿ ಹೋಗುವುದಿಲ್ಲ" (ಮುಸ್ಲಿಮ್).

**ಪ್ರಾರ್ಥನೆ ಸ್ವೀಕರಿಸಲ್ಪಡುವ ಸಮಯಗಳು:**

(1) ಲೈಲತುಲ್ ಖದ್ರ್ (2) ರಮದಾನ್ ತಿಂಗಳು (3) ಅದಾನ್ ಹಾಗೂ ಇಕಾಮತ್‌ಗಳ ನಡುವಿನ ಸಮಯ (4) ಫರ್ಝ್ ನಮಾಝ್‌ಗಳ ಬಳಿಕ (5) ಫರ್ಝ್ ನಮಾಝ್‌ನ ಅದಾನ್ ಕರೆಯುವಾಗ (6) ರಾತ್ರಿ ಸಮಯ (7) ಅರಫಾದ ದಿನ (10) ಶುಕ್ರವಾರ (11) ಅಲ್ಲಾಹನ ಮಾರ್ಗದಲ್ಲಿ ಹೋರಾಟಕ್ಕೆ ಸಿದ್ಧವಾಗುವ ಸಮಯ (12) ವಿಪತ್ತುಗಳು ಬಾಧಿಸುವಾಗ.

**ಸ್ವೀಕರಿಸಲ್ಪಡುವ ಸ್ಥಳಗಳು:**

(1) ಮುಸ್ಲಿಮರು ಒಂದುಗೂಡಿದ ಸದಸ್ಸು(ಸಭೇ)ಗಳು (2) ಕಅಬಾದ ಬಳಿ (ವಿಶೇಷವಾಗಿ ಕಅಬಾದ ಬಾಗಿಲು ಹಾಗೂ ಹಜರುಲ್ ಅಸ್ವದ್ ಇರುವ ಮೂಲೆಯ ನಡುವಿನ ಸ್ಥಳದ ಮುಲ್‌ತಝಮ್ ಎಂಬಲ್ಲಿ)

(3) ಸಫಾ, ಮರ್ವ (4) ಝಂಝಂ (5) ಅರಫಾ (6) ಮಿನಾ ಎಂಬೀ ಸ್ಥಳಗಳಲ್ಲಿ ಪ್ರಾರ್ಥನೆಗಳನ್ನು ಹೆಚ್ಚಿಸಬೇಕು.

**ಸ್ವೀಕರಿಸಲ್ಪಡುವ ವಿಭಾಗಗಳು:**

(1) ಅಕ್ರಮಿಗಳಿಂದ ಅಕ್ರಮಕ್ಕೀಡಾದವನ ಪ್ರಾರ್ಥನೆ (2) ನ್ಯಾಯವಂತನಾದ ಆಡಳಿತಗಾರನ ಪ್ರಾರ್ಥನೆ (3) ಮಾತಾಪಿತರ ಪ್ರಾರ್ಥನೆ (4) ಮಾತಾಪಿತರಿಗೆ ಒಳಿತನ್ನು ಮಾಡುವ ಮಕ್ಕಳ ಪ್ರಾರ್ಥನೆ (5) ನೀತಿವಂತನಾದ ಇಮಾಮನ ಪ್ರಾರ್ಥನೆ (6) ಉಪವಾಸ ವ್ರತದಲ್ಲಿರುವವನ ಪ್ರಾರ್ಥನೆ (7) ಪ್ರಯಾಣಿಕನ ಪ್ರಾರ್ಥನೆ.

**ತ್ಯಜಿಸಬೇಕಾದ ಕೆಟ್ಟ ಶಿಷ್ಟಾಚಾರಗಳು:**

(1) ಉಚ್ಛ ಸ್ವರದಲ್ಲಿ ಪ್ರಾರ್ಥಿಸುವುದು (2) ಭಕ್ತಿ ಹಾಗೂ ವಿನಯಗಳಿಗೆ ಹೊಂದಿಕೆಯಾಗದ ಮಾತುಗಳನ್ನು ಪ್ರಯೋಗಿಸುವುದು (3) ಇಂತಿಂತಹ ವಿಷಯಗಳನ್ನು ಇಂತಿಂತಹ ರೀತಿಯಲ್ಲಿ ಮಾಡಿ ಕೊಡಬೇಕೆಂದು ಪ್ರಾರ್ಥಿಸುವುದು (4) ಉತ್ತಮವಲ್ಲದ ಮತ್ತು ಅಲ್ಲಾಹನಿಗೆ ತೃಪ್ತಿಯಾಗದ ವಿಷಯಗಳನ್ನು ಬೇಡುವುದು (5) ಅಲ್ಲಾಹೇತರರೊಂದಿಗೆ ನೇರವಾಗಿ ಅಥವಾ ಅಲ್ಲಾಹೇತರರನ್ನು ಮುಂದಿಟ್ಟು ಪ್ರಾರ್ಥಿಸುವುದು (6) ಉದ್ದೇಶಿಸಿದ ರೀತಿಯಲ್ಲಿ ಉತ್ತರ ಸಿಗದಾಗ ಅತೃಪ್ತಿ ಅಥವಾ ನಿರಾಶೆ ವ್ಯಕ್ತ ಪಡಿಸುವುದು.

**ಅತೀ ಹೆಚ್ಚು ಉತ್ತರ ಸಿಗುವ ಸಮಯ:**

ಅತೀ ಹೆಚ್ಚು ಉತ್ತರ ಸಿಗುವ ಪ್ರಾರ್ಥನೆ ಯಾವುದೆಂದು ಕೇಳಿದಾಗ ಪ್ರವಾದಿ(ಸ)ರು ಹೇಳಿದರು: "ರಾತ್ರಿಯ ಕೊನೇ ಘಳಿಗೆಯಲ್ಲಿ ಮತ್ತು ಫರ್ಝ್ ನಮಾಝ್‌ಗಳ ಬಳಿಕ" (ತುರ್ಮುದಿ).

(ಮುಂದುವರಿಯುವುದು)

ಎಪ್ರಿಲ್ ಮೊದಲ ವಾರ ಮಂಗಳೂರಿನಿಂದ ಮಂಗಳೂರಿಗೆ
AL-SALAM UMRAH & HAJJ SERVICES
ಅಲ್ ಸಲಾಮ್ ಉಮ್ರಾ ಮತ್ತು ಹಜ್ಜ್ ಸರ್ವಿಸಸ್
Hanif Khazi
9611031313
9590191313
Offi.: 0824-4252882
Faiz: 9845225380
ನುರಿತ ಸಲಫಿ ಆಲಿಮ್‌ಗಳ ಮಾರ್ಗದರ್ಶನದಲ್ಲಿ ❖
ಪವಿತ್ರ ಮಕ್ಕಾ, ಮದೀನಾದ ಸಮೀಪ ವಸತಿ ಸೌಲಭ್ಯ ❖
ಊರ ಮಾದರಿಯ ಊಟೋಪಚಾರ ❖
A-3, 1st Floor, IMPALA Building, Mangalore
E-mail : haneefkhazi25@gmail.com

# ಇಸ್ಲಾಮಿಕ್ ಕ್ವಿಝ್

✍ ಮುಬಲಿಖು

17. ಪ್ರಥಮವಾಗಿ ಇಸ್ಲಾಮ್ ಸ್ವೀಕರಿಸಿದ ಮಹಿಳೆ ಯಾರು?
18. "ಮನುಷ್ಯನು ಉತ್ತಮ ಸೃಷ್ಟಿ" ಎಂದು ತಿಳಿಸಿದ ಸೂರಾ ಯಾವುದು?
19. ಅಲ್ಲಾಹು ಆಕಾಶಕ್ಕೆ ಎತ್ತಿದ ಪ್ರವಾದಿ ಯಾರು?
20. ಅಬೂಬಕ್ಕರ್(ರ)ರವರು ಎಷ್ಟು ವರ್ಷ ಕಾಲ ಆಡಳಿತ ನಡೆಸಿದರು.
21. ಇಸ್ಲಾಮಿಗಾಗಿ ರಕ್ತ ಸಾಕ್ಷಿಯಾದ ಪ್ರಥಮ ಮಹಿಳೆ ಯಾರು?
22. ಶೈತಾನ್ ಯಾವ ವರ್ಗಕ್ಕೆ ಸೇರಿದವನಾಗಿದ್ದಾನೆ.
23. ಕುರ್‌ಆನಿನಲ್ಲಿ "ಮೀಮ್" ಇಲ್ಲದ ಸೂರಃ ಯಾವುದು?
24. ಲುಕ್‌ಮಾನ್(ಅ)ರವರು ತನ್ನ ಮಗನಿಗೆ ನೀಡಿದ ಉಪದೇಶಗಳಲ್ಲಿ ಪ್ರಧಾನವಾದ ಉಪದೇಶ ಯಾವುದು?

ಉತ್ತರ : 17. ಖದೀಜಾ(ರ) 18. ಸೂರಃ ಅತ್ತೀನ್ 19. ಈಸಾ(ಅ) 20. 2 ವರ್ಷ 3 ತಿಂಗಳು 21. ಸುಮಯ್ಯಾ(ರ) 22. ಜಿನ್ನ್ ವರ್ಗಕ್ಕೆ 23. ಸೂರಃ ಕೌಸರ್ 24. ಅಲ್ಲಾಹನೊಂದಿಗೆ ಯಾರನ್ನೂ (ಯಾವುದನ್ನೂ) ಸಹಭಾಗಿಯನ್ನಾಗಿ ಮಾಡಬೇಡ).

# ಇಸ್ಲಾಮ್ ಖಡ್ಗದಿಂದ ಪ್ರಚಾರಗೊಂಡ ಧರ್ಮವಲ್ಲ!

(2ನೇ ಪುಟದಿಂದ)

ಇಹಪರಗಳಲ್ಲಿ ಸೌಭಾಗ್ಯ ಸಿದ್ಧಿಸಲು ಸಾಧ್ಯ ಎಂಬುದು ಚಿಂತನಶೀಲರಾದ ಎಲ್ಲರಿಗೂ ಸ್ಪಷ್ಟವಾಗಿ ಗ್ರಹಿಸಬಹುದಾಗಿದೆ. ಆದ್ದರಿಂದ ಶುದ್ಧ ಪ್ರಕೃತಿಯೊಂದಿಗೆ ಮತ್ತು ವಾಸ್ತವ ಬೋಧದೊಂದಿಗೆ ಬದುಕಲು ಬಯಸುವ ಯಾರನ್ನೂ ಇಸ್ಲಾಮೀ ತತ್ತ್ವಾದರ್ಶ ಸ್ವೀಕರಿಸಲು ಬಲವಂತ ಪಡಿಸಬೇಕಾದ ಅಗತ್ಯವಿಲ್ಲ. ಅಖಿಲ ಬ್ರಹ್ಮಾಂಡವನ್ನು, ವಿಶೇಷವಾಗಿ ಮಾನವ ಎಂಬ ಮಹಾ ಅದ್ಭುತವನ್ನು ಸೃಷ್ಟಿಸಿ ಸಂರಕ್ಷಿಸುತ್ತಿರುವ ಸರ್ವಜ್ಞನೂ ಸರ್ವಶಕ್ತನೂ ಆದ ಅಲ್ಲಾಹು ಮಾನವರನ್ನು ಪಥಭ್ರಷ್ಟತೆ ಮತ್ತು ಅಧಃಪತನದಿಂದ ರಕ್ಷಿಸಲಿಕ್ಕಾಗಿ ಪ್ರದಾನ ಮಾಡಿದ ನ್ಯೂನತೆಗಳಿಲ್ಲದ ಮಾರ್ಗದರ್ಶನದ ಮೌಲಿಕತೆಯು ಪಕ್ವತೆ ಹಾಗೂ ನಿಷ್ಕಳಂಕ ಮನಸ್ಥಿತಿಯಿರುವ ಮಂದಿಗೆ ಎಲ್ಲಾ ಕಾಲಗಳಲ್ಲೂ ಸುಸ್ಪಷ್ಟವಾಗಿ ಅನುಭವಗೊಂಡಿದೆ. ಸದಾಚಾರ ಉಲ್ಲಂಘನೆ ಮತ್ತು ದುಷ್ಕೃತ್ಯಗಳು ಸಾರ್ವತ್ರಿಕವಾಗಿರುವ ಪಾಶ್ಚಾತ್ಯ ಸಮುದಾಯಗಳಲ್ಲಿ ಕೂಡಾ ಬಹಳಷ್ಟು ಮಂದಿ ಕುರ್‌ಆನಿನ ಮಾರ್ಗದರ್ಶನದ ಉಜ್ವಲತೆಯನ್ನು ಕಂಡುಕೊಳ್ಳುತ್ತಿದ್ದಾರೆ.

2:256 ಮತ್ತು 2:257ರಲ್ಲಿ ಪ್ರಸ್ತಾಪಿಸಿದ ತಾಗೂತ್ ಎಂದರೆ ಕಠಿಣ ಧಿಕ್ಕಾರ ಅಥವಾ ಅತಿಕ್ರಮಗಳನ್ನೆಸಗುವ ಎಲ್ಲರೂ ತಾಗೂತ್ ಎಂಬ ಪದದ ಅರ್ಥ ವ್ಯಾಪ್ತಿಯಲ್ಲಿ ಸೇರುತ್ತಾರೆ. ಆದರೆ ಅಲ್ಲಾಹನ ವಿರುದ್ಧ ಮಾನವರಲ್ಲಿ ಬಹುತೇಕ ಮಂದಿ ಎಸಗುತ್ತಿರುವ ಅತಿಕ್ರಮವೆಂದರೆ ಅಲ್ಲಾಹನನ್ನು ಬಿಟ್ಟು ಇತರ ಶಕ್ತಿ, ವ್ಯಕ್ತಿ, ವಸ್ತುಗಳಿಗೆ ದಿವ್ಯತ್ವ ಕಲ್ಪಿಸುವುದು. ಆದುದರಿಂದ ತಾಗೂತ್ ಎಂಬ ಪದದ ಉದ್ದೇಶ, ಅಲ್ಲಾಹನ ಹೊರತು ದಿವ್ಯತ್ವ ಕಲ್ಪಿಸಲ್ಪಡುವವರು ಮತ್ತು ಆರಾಧಿಸಲ್ಪಡುವವರು ಎಂಬುದಾಗಿದೆಯೆಂದು ಹಲವು ವ್ಯಾಖ್ಯಾನಕಾರರು ಅಭಿಪ್ರಾಯ ಪಟ್ಟಿರುತ್ತಾರೆ. ಕೆಲವರು ಈಸಾ (ಅ)ರನ್ನು ಆರಾಧಿಸುತ್ತಿದ್ದರೂ ಈಸಾ (ಅ) ಆ ಆರಾಧನೆಯನ್ನು ಅಂಗೀಕರಿಸದವರೂ ಇಷ್ಟಪಡದವರೂ ಆಗಿರುವುದರಿಂದ ಅವರು ತಾಗೂತ್ ಎಂಬ ಪದದ ಅರ್ಥ ವ್ಯಾಪ್ತಿಯಲ್ಲಿ ಬರುವುದಿಲ್ಲ. ಅಲ್ಲಾಹೇತರರಿಗೆ ದಿವ್ಯತ್ವ ಕಲ್ಪಿಸಲು ಪ್ರೇರೇಪಿಸುವ ಅತೀ ದೊಡ್ಡ ದುಶ್ಶಕ್ತಿ ಇಬ್ಲೀಸ್ ಅಥವಾ ಶೈತಾನನಾಗಿದ್ದಾನೆ. ಕೆಲವರು ಶೈತಾನನನ್ನೇ ಆರಾಧಿಸುತ್ತಾರೆ. ಕೆಲವರು ಶೈತಾನನ ಸಂತತಿಗಳಾದ ಜಿನ್ನ್‌ಗಳೊಡನೆ ಸಹಾಯ ಯಾಚಿಸುತ್ತಾರೆ.

الذين امنوا يقاتلون في سبيل الله والذين كفروا يقاتلون في سبيل الطاغوت فقاتلوا أولياء الشيطن إن كيد الشيطن كان ضعيفا ۞

"ಸತ್ಯವಿಶ್ವಾಸಿಗಳು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುತ್ತಾರೆ ಮತ್ತು ಸತ್ಯನಿಷೇಧಿಗಳು ಮಿಥ್ಯಾರಾಧ್ಯರ ಮಾರ್ಗದಲ್ಲಿ ಯುದ್ಧ ಮಾಡುತ್ತಾರೆ. ಆದುದರಿಂದ ನೀವು ಶೈತಾನನ ಮಿತ್ರರೊಂದಿಗೆ ಯುದ್ಧ ಮಾಡಿರಿ. ನಿಶ್ಚಯವಾಗಿಯೂ ಶೈತಾನನ ತಂತ್ರವು ದುರ್ಬಲವಾಗಿದೆ" (ಕುರ್‌ಆನ್ 4:76).

ألم تر إلى الذين يزعمون أنهم امنوا بما أنزل إليك وما أنزل من قبلك يريدون أن يتحاكموا إلى الطاغوت وقد أمروا أن يكفروا به ويريد الشيطن أن يضلهم ضللا بعيدا ۞

"(ಪ್ರವಾದಿಯವರೇ), ನಿಮಗೆ ಅವತೀರ್ಣಗೊಳಿಸಿರುವುದರಲ್ಲಿ ಮತ್ತು ನಿಮಗಿಂತ ಮುಂಚೆ ಅವತೀರ್ಣಗೊಳಿಸಿರುವುದರಲ್ಲಿ ನಾವು ವಿಶ್ವಾಸವಿಟ್ಟಿದ್ದೇವೆಂದು (ವೃಥಾ) ಹೇಳುವವರನ್ನು ನೀವು ನೋಡಿಲ್ಲವೇ? ಆದರೆ ಅವರು (ವಾಸ್ತವದಲ್ಲಿ) ಅದರಲ್ಲಿ (ಮಿಥ್ಯ ಆರಾಧ್ಯರಲ್ಲಿ) ಅವಿಶ್ವಾಸ ತಾಳುವಂತೆ ಅವರೊಡನೆ ಆಜ್ಞಾಪಿಸಲಾಗಿತ್ತು. ಶೈತಾನನು ಅವರನ್ನು ವಿದೂರವಾದ ಪಥಭ್ರಷ್ಟತೆಯಲ್ಲಿ ಹಾಕಲಿಚ್ಛಿಸುತ್ತಾನೆ" (ಕುರ್‌ಆನ್ 4:60).

ಮುಸ್ಲಿಮನೊಬ್ಬ ವಿವಾದವೊಂದರ ಪರಿಹಾರಕ್ಕಾಗಿ ಪ್ರವಾದಿ(ಸ)ರ ತೀರ್ಪನ್ನು ಕೋರದೆ ಜೋತಿಷ್ಯನ ತೀರ್ಪನ್ನು ಬಯಸಿ ಹೋದ ಸಂದರ್ಭದಲ್ಲಿ ಈ ಸೂಕ್ತವು ಅವತೀರ್ಣಗೊಂಡಿದೆಯೆಂದು ವರದಿಯಾಗಿದೆ. ಅಲ್ಲಾಹು ಮತ್ತು ರಸೂಲ್(ಸ)ರ ತೀರ್ಮಾನಕ್ಕೆ ವಿರುದ್ಧವಾಗಿ ತೀರ್ಮಾನ ಹೊರಡಿಸುವ ಯಾವನೇ ವ್ಯಕ್ತಿ ತಾಗೂತ್ ಎಂಬ ಪದದ ಅರ್ಥ ವ್ಯಾಪ್ತಿಯಲ್ಲಿ ಸೇರುತ್ತಾನೆಯೆಂದು ಮೇಲಿನ ಸೂಕ್ತದಿಂದ ಸ್ಪಷ್ಟವಾಗುತ್ತದೆ. ಅಂತಹವರ ತೀರ್ಮಾನವನ್ನು ಬಯಸುವುದು ಸತ್ಯವಿಶ್ವಾಸಕ್ಕೆ ವಿರುದ್ಧವಾಗಿದೆ.

ಲೌಕಿಕ ಅಥವಾ ಧಾರ್ಮಿಕವಾದ ಹಿತಾಸಕ್ತಿಗಳಿಗಾಗಿ ಹಲವು ವಿಧದ ತಾಗೂತ್‌ಗಳನ್ನು ಆರಾಧಿಸುವವರು ಮತ್ತು ಅವರ ಭಕ್ತಾಳಿಗಳಿಗಾಗಿ ಜೋತುಬಿದ್ದು ಅವರನ್ನು ತಕ್‌ಲೀದ್ ಮಾಡುವ ಬಹಳಷ್ಟು ಮಂದಿಯಿದ್ದಾರೆ. ಸಕಲ ತಾಗೂತ್‌ಗಳನ್ನು ತಿರಸ್ಕರಿಸಿ ಎಲ್ಲಾ ವಿಷಯಗಳಲ್ಲೂ ಅಲ್ಲಾಹನ ವಿಧಿ-ನಿಷೇಧಗಳು ಮತ್ತು ತೀರ್ಮಾನಗಳನ್ನು ಅಂಗೀಕರಿಸಿದರೆ ಮಾತ್ರವೇ ನಿಜವಾದ ಸತ್ಯವಿಶ್ವಾಸಿಯಾಗಲು ಸಾಧ್ಯ. ಬದುಕು ಸಂದಿಗ್ಧತೆಯಲ್ಲಾದಾಗ ಒಂದು ಹಿಡಿದಾರಕ್ಕಾಗಿ ಹೆಚ್ಚಿನವರು ತಾಗೂತ್‌ಗಳನ್ನು ಹಿಂಬಾಲಿಸುತ್ತಾರೆ. ಆದರೆ ಅಲ್ಲಾಹನ ಇಚ್ಛೆಗೆ ವಿರುದ್ಧವಾಗಿ ಉಪಕಾರ ಅಥವಾ ಉಪದ್ರವ ಮಾಡಲು ಯಾರಿಂದಲೂ ಸಾಧ್ಯವಿಲ್ಲದ್ದರಿಂದ ಆ ಹಿಡಿದಾರಗಳಿಗೆ ಅಂತಿಮವಾಗಿ ರಕ್ಷಣೆ ನೀಡಲಾಗದು. ಅಲ್ಲಾಹನಲ್ಲಿರುವ ಅಚಂಚಲವಾದ ವಿಶ್ವಾಸವೆಂಬ ಹಿಡಿದಾರ ಮಾತ್ರವೇ ಎಂದಿಗೂ ಕಡಿದು ಹೋಗದ ರಕ್ಷಾ ಕವಚವಾಗಿ ವರ್ತಿಸುತ್ತದೆ.

ومن يسلم وجهه إلى الله وهو محسن فقد استمسك بالعروة الوثقى وإلى الله عاقبة الأمور ۞

"ಸತ್ಕರ್ಮಿಯಾಗಿರುವ ಯಾರಾದರೂ ತನ್ನ ಸರ್ವಸ್ವವನ್ನೂ ಅಲ್ಲಾಹನಿಗೆ ಸಮರ್ಪಿಸಿದರೆ ಅವನು ಖಂಡಿತವಾಗಿಯೂ ಅತ್ಯಂತ ಬಲವಾದ ಹಿಡಿದಾರವನ್ನು ಹಿಡಿದುಕೊಂಡನು. (ಎಲ್ಲಾ) ವಿಷಯಗಳ ಪರ್ಯವಸಾನವು ಅಲ್ಲಾಹನ ಕಡೆಗೇ ಆಗಿದೆ" (ಕುರ್‌ಆನ್ 31:22).

ಅಲ್ಲಾಹನ ಸಂರಕ್ಷಣೆಯ ಕುರಿತು ನೈಜ ವಿಶ್ವಾಸಿಗಳಿಗಿರುವ ನಿರೀಕ್ಷೆ ಮತ್ತು ದೇವಿದೇವರುಗಳು, ಭೂತ-ಪ್ರೇತಗಳು ಹಾಗೂ ದುಃಶ್ಶಕ್ತಿಗಳನ್ನು ರಕ್ಷಕರಾಗಿ ಮಾಡುವವರ ನಿರೀಕ್ಷೆಗಳನ್ನು 2:257ನೇ ಸೂಕ್ತದಲ್ಲಿ ಅಲ್ಲಾಹು ಹೋಲಿಕೆ ಮಾಡುತ್ತಾನೆ. ಬದುಕಿನ ದಾರಿಗಳೆಲ್ಲಾ ಕಗ್ಗತ್ತಲು ಮೂಡಿದಾಗ ದೂರದ ಎಲ್ಲಾದರೂ ಇರುವ ಬೆಳಕಿನೆಡೆಗೆ ಕೈ ಹಿಡಿದು ಕೊಂಡೊಯ್ಯಲು ತಮ್ಮ ಆರಾಧ್ಯರಿಗೆ ಸಾಧ್ಯವಿದೆಯೆಂದು ಬಹುದೇವಾರಾಧಕರು ನಿರೀಕ್ಷಿಸುತ್ತಾರೆ. ಅದೇ ರೀತಿ ಕಗ್ಗತ್ತಲ ರಾತ್ರಿಯಲ್ಲಿ ಬೆಳಕಿಗಾಗಿ ಅಲೌಕಿಕ ಸೃಷ್ಟಿಗಳಾದ ಜಿನ್ನ್, ಮಲಕ್‌ಗಳೊಂದಿಗೆ ಸಹಾಯ ಯಾಚಿಸಬಹುದು, ಅದು ಬಹುದೇವಾರಾಧನೆಯಲ್ಲವೆಂದು ವಾದಿಸುವವರೂ ಇದ್ದಾರೆ. ವಾಸ್ತವದಲ್ಲಿ ತಾಗೂತ್‌ಗಳು ಮಾಡುವ ಕೆಲಸವೇನೆಂದರೆ, ಇರುವ ಬೆಳಕನ್ನು ಸಹ ನಂದಿಸಿ ಜನರನ್ನು ಕ್ರೂರ ಕತ್ತಲೆಯ ಕೂಪಕ್ಕೆ ತಳ್ಳುತ್ತಾರೆಂದು ಅಲ್ಲಾಹು ಸ್ಪಷ್ಟಪಡಿಸುತ್ತಾನೆ.

أفحسب الذين كفروا أن يتخذوا عبادي من دوني أولياء إنا أعتدنا جهنم للكفرين نزلا ۞

"ನನ್ನನ್ನು ಬಿಟ್ಟು ನನ್ನ ದಾಸರನ್ನು ರಕ್ಷಕರಾಗಿ ಮಾಡಿಕೊಳ್ಳಬಹುದೆಂದು ಸತ್ಯನಿಷೇಧಿಗಳು ಭಾವಿಸಿರುವರೇ? ನಿಶ್ಚಯವಾಗಿಯೂ ನಾವು ಸತ್ಯನಿಷೇಧಿಗಳಿಗೆ ಸತ್ಕಾರವಾಗಿ ನರಕವನ್ನು ಸಿದ್ಧಗೊಳಿಸಿಟ್ಟಿದ್ದೇವೆ" (ಕುರ್‌ಆನ್ 18:102).

●

# ಅಧ್ಯಾಯ - 3 ಆಲ್ ಇಮ್ರಾನ್

ಒಟ್ಟು ಸೂಕ್ತಗಳು: 200 ಮುಹಮ್ಮದ್ ಅಮಾನಿ ಮೌಲವಿ ಪ್ರಕಟಿತ ಸೂಕ್ತಗಳು: 113, 114, 115, 116, 117

113 لَيْسُوْا سَوَآءً مِنْ اَهْلِ الْكِتٰبِ اُمَّةٌ قَآئِمَةٌ يَّتْلُوْنَ اٰيٰتِ اللّٰهِ اٰنَآءَ الَّيْلِ وَ هُمْ يَسْجُدُوْنَ ﴿١١٣﴾

114 يُؤْمِنُوْنَ بِاللّٰهِ وَالْيَوْمِ الْاٰخِرِ وَ يَاْمُرُوْنَ بِالْمَعْرُوْفِ وَيَنْهَوْنَ عَنِ الْمُنْكَرِ وَيُسَارِعُوْنَ فِى الْخَيْرٰتِ وَاُولٰٓئِكَ مِنَ الصّٰلِحِيْنَ ﴿١١٤﴾

115 وَمَا يَفْعَلُوْا مِنْ خَيْرٍ فَلَنْ يُّكْفَرُوْهُ وَاللّٰهُ عَلِيْمٌ بِالْمُتَّقِيْنَ ﴿١١٥﴾

116 اِنَّ الَّذِيْنَ كَفَرُوْا لَنْ تُغْنِىَ عَنْهُمْ اَمْوَالُهُمْ وَلَآ اَوْلَادُهُمْ مِّنَ اللّٰهِ شَيْـًٔا وَاُولٰٓئِكَ اَصْحٰبُ النَّارِ هُمْ فِيْهَا خٰلِدُوْنَ ﴿١١٦﴾

117 مَثَلُ مَا يُنْفِقُوْنَ فِىْ هٰذِهِ الْحَيٰوةِ الدُّنْيَا كَمَثَلِ رِيْحٍ فِيْهَا صِرٌّ اَصَابَتْ حَرْثَ قَوْمٍ ظَلَمُوْٓا اَنْفُسَهُمْ فَاَهْلَكَتْهُ وَمَا ظَلَمَهُمُ اللّٰهُ وَلٰكِنْ اَنْفُسَهُمْ يَظْلِمُوْنَ ﴿١١٧﴾

113

| | | | | | |
|---|---|---|---|---|---|
| ಪಾರಾಯಣ ಮಾಡುವರು يَّتْلُوْنَ | ನೇರವಾಗಿ ನಿಲ್ಲುವ قَآئِمَةٌ | ಒಂದು ಸಮೂಹ اُمَّةٌ | ಗ್ರಂಥದವರಲ್ಲಿದ್ದಾರೆ مِنْ اَهْلِ الْكِتٰبِ | ಒಂದೇ ರೀತಿ سَوَآءً | ಅವರಲ್ಲ لَيْسُوْا |
| | | ಅವರು ಸಾಷ್ಟಾಂಗವೆರಗುತ್ತ وَ هُمْ يَسْجُدُوْنَ | ರಾತ್ರಿ ಸಮಯಗಳಲ್ಲಿ اٰنَآءَ الَّيْلِ | ಅಲ್ಲಾಹನ ವಚನಗಳನ್ನು اٰيٰتِ اللّٰهِ | |

114

| | | | | | |
|---|---|---|---|---|---|
| ಸದಾಚಾರದಿಂದ بِالْمَعْرُوْفِ | ಮತ್ತು ಅವರು ಆದೇಶಿಸುತ್ತಾರೆ وَ يَاْمُرُوْنَ | ಮತ್ತು ಅಂತ್ಯ ದಿನದಲ್ಲಿ وَالْيَوْمِ الْاٰخِرِ | ಅಲ್ಲಾಹನಲ್ಲಿ بِاللّٰهِ | ಅವರು ವಿಶ್ವಾಸವಿಡುತ್ತಾರೆ يُؤْمِنُوْنَ | |
| ಸಜ್ಜನರಲ್ಲಿ ಸೇರಿದವರಾಗಿದ್ದಾರೆ مِنَ الصّٰلِحِيْنَ | ಅಂತಹವರು وَاُولٰٓئِكَ | ಸತ್ಕಾರ್ಯಗಳಲ್ಲಿ فِى الْخَيْرٰتِ | ಮತ್ತು ಅವರು ಪರಸ್ಪರ ತವಕ ಪಡುತ್ತಿರುತ್ತಾರೆ وَيُسَارِعُوْنَ | ದುರಾಚಾರದ ಬಗ್ಗೆ عَنِ الْمُنْكَرِ | ಮತ್ತು ಅವರು ವಿರೋಧಿಸುತ್ತಾರೆ وَيَنْهَوْنَ |

115

| | | | | | |
|---|---|---|---|---|---|
| ತಿಳಿಯುವವನಾಗಿದ್ದಾನೆ عَلِيْمٌ | ಅಲ್ಲಾಹು وَاللّٰهُ | ಅದರಲ್ಲಿ ಅವರೊಡನೆ ಕೃತಘ್ನತೆ ತೋರಿಸಲಾಗುವುದಿಲ್ಲ فَلَنْ يُّكْفَرُوْهُ | ಸತ್ಕಾರ್ಯಗಳಾಗಿ مِنْ خَيْرٍ | ಅವರು ಏನೇ ಮಾಡುವುದಾದರೂ وَمَا يَفْعَلُوْا | |
| | | | | | ದೇವಭಯ ಪಾಲಿಸುವವರ ಬಗ್ಗೆ بِالْمُتَّقِيْنَ |

116

| | | | | | |
|---|---|---|---|---|---|
| ಅಲ್ಲಾಹನಿಂದ مِّنَ اللّٰهِ | ಮತ್ತು ಅವರ ಮಕ್ಕಳು وَلَآ اَوْلَادُهُمْ | ಅವರ ಸಂಪತ್ತುಗಳು اَمْوَالُهُمْ | ಅವರಿಗೆ عَنْهُمْ | ತಡೆಯಲಾರರು لَنْ تُغْنِىَ | ನಿಶ್ಚಯವಾಗಿಯೂ ಸತ್ಯನಿಷೇಧಿಗಳು اِنَّ الَّذِيْنَ كَفَرُوْا |
| | ಶಾಶ್ವತವಾಸಿಗಳಾಗಿದ್ದಾರೆ خٰلِدُوْنَ | ಅವರು ಅದರಲ್ಲಿ هُمْ فِيْهَا | ನರಕದ ಜನರಾಗಿದ್ದಾರೆ اَصْحٰبُ النَّارِ | ಮತ್ತು ಅವರು وَاُولٰٓئِكَ | ಏನನ್ನೂ شَيْـًٔا |

117

| | | | | | |
|---|---|---|---|---|---|
| ಒಂದು ಗಾಳಿಯ رِيْحٍ | ಉದಾಹರಣೆಯಂತಿದೆ كَمَثَلِ | ಐಹಿಕವಾದ الدُّنْيَا | ಈ ಜೀವನದಲ್ಲಿ فِىْ هٰذِهِ الْحَيٰوةِ | ಅವರು ವೆಚ್ಚ ಮಾಡುವ يُنْفِقُوْنَ | ಯಾವುದರ ಉದಾಹರಣೆ مَثَلُ مَا |
| ಅವರ ಮೇಲೆಯೇ اَنْفُسَهُمْ | ಅವರು ಅಕ್ರಮವೆಸಗಿದ್ದಾರೆ ظَلَمُوْٓا | ಒಂದು ಜನಾಂಗದ ಕೃಷಿ ಭೂಮಿಗೆ حَرْثَ قَوْمٍ | ಅದು ಬಾಧಿಸಿತು اَصَابَتْ | ಅತ್ಯಂತ ಶೀತಲ صِرٌّ | ಅದರಲ್ಲಿದೆ فِيْهَا |
| ಅಕ್ರಮವೆಸಿದರು يَظْلِمُوْنَ | ಅವರು ತಮ್ಮ ಮೇಲೆಯೇ اَنْفُسَهُمْ | ಆದರೆ وَلٰكِنْ | ಅಲ್ಲಾಹು اللّٰهُ | ಅವರನ್ನು ಅಕ್ರಮಿಸಲಿಲ್ಲ وَمَا ظَلَمَهُمُ | ಹಾಗೆ ಅದು ಅದನ್ನು ನಾಶ ಮಾಡಿತು فَاَهْلَكَتْهُ |

113. ಅವರು (ಗ್ರಂಥದವರೆಲ್ಲರೂ) ಒಂದೇ ರೀತಿಯಲ್ಲ. ಗ್ರಂಥದವರಲ್ಲಿ ನೇರಮಾರ್ಗದಲ್ಲಿ ನೆಲೆಗೊಳ್ಳುವ ಒಂದು ಸಮೂಹವಿದೆ. ಅವರು ರಾತ್ರಿ ಸಮಯಗಳಲ್ಲಿ ಸಾಷ್ಟಾಂಗವೆರಗುತ್ತ ಅಲ್ಲಾಹನ ಸೂಕ್ತಗಳನ್ನು ಪಾರಾಯಣ ಗೈಯ್ಯುತ್ತಾರೆ.

114. ಅವರು ಅಲ್ಲಾಹನಲ್ಲಿಯೂ ಅಂತ್ಯದಿನದಲ್ಲಿಯೂ ವಿಶ್ವಾಸವಿಡುತ್ತಾರೆ. ಅವರು ಸದಾಚಾರದ ಆದೇಶವನ್ನೀಯುತ್ತಾರೆ, ದುರಾಚಾರದ ಕುರಿತು ವಿರೋಧಿಸುತ್ತಾರೆ ಮತ್ತುಒಳಿತಿನ ಕಾರ್ಯಗಳಲ್ಲಿ ಪರಸ್ಪರ ತವಕ ಪಡುತ್ತಿರುತ್ತಾರೆ ಮತ್ತು ಅವರು ಸಜ್ಜನರಲ್ಲಿ ಸೇರಿದವರೂ ಆಗಿದ್ದಾರೆ.

115. ಮತ್ತು ಅವರು ಸತ್ಕಾರ್ಯಗಳಾಗಿ ಏನನ್ನು ಮಾಡಿದರೂ ಅವರೊಡನೆ ಕೃತಘ್ನತೆ ತೋರಲಾಗುವುದಿಲ್ಲ ಮತ್ತು ದೇವಭಯವುಳ್ಳವರ ಬಗ್ಗೆ ಅಲ್ಲಾಹು ಅರಿಯುವವನಾಗಿದ್ದಾನೆ.

116. ಖಂಡಿತವಾಗಿಯೂ ಸತ್ಯನಿಷೇಧಿಗಳ ಸಂಪತ್ತುಗಳಾಗಲಿ, ಸಂತಾನಗಳಾಗಲಿ ಅವರಿಗೆ ಅಲ್ಲಾಹನಿಂದ (ಅಲ್ಲಾಹನ ಶಿಕ್ಷೆಯಿಂದ) ಏನನ್ನೂ ತಡೆದುಕೊಡಲಾರವು ಮತ್ತು ಅವರು ನರಕದ ಜನರಾಗಿದ್ದಾರೆ. ಅದರಲ್ಲಿ ಅವರು ಶಾಶ್ವತವಾಸಿಗಳಾಗಿರುವರು.

117. ಈ ಇಹ ಜೀವನದಲ್ಲಿ ಅವರು ವೆಚ್ಚ ಮಾಡುವುದರ ಉಪಮೆಯು, ತಮ್ಮ ಮೇಲೆಯೇ ಅಕ್ರಮವೆಸಗಿಕೊಂಡ ಒಂದು ಜನಾಂಗದ ಕೃಷಿ ಭೂಮಿಗೆ ಹೊಡೆದು ಅದನ್ನು ನಾಶ ಮಾಡಿಬಿಟ್ಟ ಒಂದು ಶೀತಲ ಗಾಳಿಯಂತಿದೆ. ಅಲ್ಲಾಹು ಅವರೊಡನೆ ಅಕ್ರಮವೆಸಗಲಿಲ್ಲ, ಆದರೆ ಅವರು ತಮ್ಮ ಮೇಲೆ ತಾವೇ ಅಕ್ರಮವೆಸಗುತ್ತಿದ್ದಾರೆ.

Name & Address:

**PAVITHRA SANDESHA**
*Kannada Fortnightly*
Polymer House, 2nd Floor, Nellikai Road, Mangalore - 575 001

Regd. With RNI No.: 63987/96
Postal Regd. No. KA/SK/MNG/160/2015-2017
Licenced to Post without prepayment Licence No.
WPP/SK/MNG-104/2015-2017
Posted at Head Post Office, Mangalore.
Posting Date: 13th & 28th of Every Month
Publication Date: 10th & 25th Every Month



# ವಾಟ್ಸಪ್ ಸಂದೇಶ ಕಾಲಂ













**ಉತ್ತಮ ಆಹಾರ**

ತನ್ನ ಕೈಯ ದುಡಿಮೆಯಿಂದ ಉಣ್ಣುವವನಿಗಿಂತ ಉತ್ತಮ ಆಹಾರ ಯಾರೂ ತಿಂದಿಲ್ಲ.
ಮುಹಮ್ಮದ್(ಸ)















Printed, Published & Owned by RIYAZ AHMED on behalf of SATHYA PRAKASHANA PUBLICATION TRUST MANGALORE, Printed at Digantha Mudrana Ltd., Yeyyadi, Mangalore, D.K. Published at 20-2-155/1, 2nd Floor, Polymer House Bldg., Nellikai Road, Mangalore - 575 001, D.K.. D.T.P.: Sowmya Graphics, Mangalore. Editor: M.G. Muhammad